ಶ್ಲೋ || ಉತ್ಪಾದ್ಯಪುತ್ರಂ ಸಂಸ್ಕೃತ್ಯ ವೇದಮಧ್ಯಾಪ್ಯ ಯಃಪಿತಾ |
ವೃತ್ತಿಂಚ ಕಲ್ಪಯೇಲ್ಲೋಕೇ ಸಮಹಾಗುರುರುಚ್ಯತ ಇತಿ ||

ದ್ವಾದಶಾಹಾಶೌಚೇಪಿ ಏಕಾದಶದಿನ ಏವೈಕೋದ್ದಿಷ್ಟಂ ಕೃತ್ವಾ ತ್ರಯೋದಶದಿನೇ ಸಪಿಂಡನಂ ಕುರ್ಯಾತ್ | ಇತಿ ವಿವೇಕಃ | "ಆದ್ಯಸ್ತ್ವೇಕಾದಶೇಹನಿ" "ಆಶೌಚಾಂತೇ ಸಪಿಂಡನಮಿತಿಚ" ವಚನಸದ್ಭಾವಾತ್ | ಇದಾನೀಂ ಕೈಶ್ಚಿದ್ಭಿರೇವಾನುಷ್ಠೀಯತೇ | ನಸರ್ವತ್ರ | ವೈದ್ಯನಾಥಪಕ್ಷೇತು ದಶಾಹಾಶೌಚಸ್ಯೈವೋಕ್ತತ್ವಾತ್ |

ಟೀ || ಮಹಾಗುರುವಾದ ತಂದೆಯ ಮೃತಿಯಲ್ಲಿ ಪುತ್ರರಿಗೆ ಹನ್ನೆರಡು ದಿನಾಶೌಚವು. ಪುತ್ರನನ್ನುತ್ಪಾದಿಸಿ ಜಾತಕರ್ಮಾದಿ ಸಂಸ್ಕಾರವನ್ನು ಮಾಡಿ ಸ್ವಯಂ ವೇದೋಪದೇಶವನ್ನು ಮಾಡಿ ಪುತ್ರನಿಗೆ ಜೀವಿಕೆಯನ್ನು ಕಲ್ಪನೆ ಮಾಡಿದ ಪಿತೃವಿಗೆ ಮಹಾಗುರುವೆಂದು ಹೆಸರು. ಇಂಥಾ ಮಹಾಗುರು ಮೃತಿಯಲ್ಲಿ ಪುತ್ರರಿಗೆ ಹನ್ನೆರಡುದಿನಾಶೌಚವಿದ್ದಾಗ್ಯೂ ಮರಣಾದ್ಯೇಕಾದಶ ದಿನದಲ್ಲಿ ಏಕೋದ್ದಿಷ್ಟವೂ, ಹದಿಮೂರನೇ ದಿನದಲ್ಲಿ ಸಪಿಂಡನವೂ ಎಂದು ಶಾಸ್ತ್ರವಿರುತ್ತದೆ. ಈ ರೀತಿ ಅನುಷ್ಠಾನವನ್ನು ಕೆಲವರು ಮಾತ್ರ ನಡೆಸುತ್ತಾರೆ. ಸರ್ವತ್ರ ರೂಢಿಯಲ್ಲಿಲ್ಲವು. ವೈದ್ಯನಾಥದೀಕ್ಷಿತರ ಪಕ್ಷವಲ್ಲವಾದ್ದರಿಂದ ಕೆಲವು ಶಿಷ್ಟರು ಅನುಷ್ಠಾನ ಮಾಡುವುದಿಲ್ಲ.

## || ಪ್ರಾಯಶ್ಚಿತ್ತಮಧ್ಯೇ ಜ್ಞಾತ್ಯಾಶೌಚ ಪ್ರಾಪ್ತೌ ||

ಅಘಾತ್ಪ್ರಾಗುಪಕ್ರಾಂತಸ್ಯ ಪ್ರಾಯಶ್ಚಿತ್ತಸ್ಯ ಅಘಮಧ್ಯೇ ಸಮಾಪ್ತಿಶ್ಚೇಚ್ಛಿಷ್ಟಾಹಮೇವಾಶೌಚಂ | ತತ್ಪರಂ ಸಮಾಪ್ತಿಶ್ಚೇತ್ತತೋಽತಿಕ್ರಾಂತ ತ್ರ್ಯಹಾದ್ಯಾಶೌಚಮನುಷ್ಠೇಯಂ |

ಟೀ || ಆಶೌಚಾತ್ಪೂರ್ವದಲ್ಲಿ ಉಪಕ್ರಮಿಸಿದ ಪ್ರಾಯಶ್ಚಿತ್ತಾದಿ ಕರ್ಮ ಮಧ್ಯಕಾಲದಲ್ಲಿ ಜ್ಞಾತ್ಯಾಶೌಚ ಪ್ರಾಪ್ತವಾಗಿ ಪ್ರಾಯಶ್ಚಿತ್ತವು ಆಶೌಚಮಧ್ಯೇ ಪೂರ್ತಿಯಾದರೆ ಪ್ರಾಯಶ್ಚಿತ್ತಾನಂತರ ಮಿಕ್ಕದಿನಗಳೆಷ್ಟೋ ಅಷ್ಟುದಿನ ಆಶೌಚವು. ಆಶೌಚದಿನ ಮುಗಿದನಂತರ ಪ್ರಾಯಶ್ಚಿತ್ತವು ಪೂರೈಸಿದರೆ ಅನಂತರ ಅತಿಕ್ರಾಂತ ತ್ರ್ಯಹಾದ್ಯಾಶೌಚವನ್ನು ಅನುಷ್ಠಾನ ಮಾಡಬೇಕು.

## || ಇತಿ ಸಪಿಂಡಾದ್ಯಾಶೌಚಂ ||



## ॥ ಅಥ ಸನ್ನಿಪಾತಾಶೌಚಂ ॥

ಸನ್ನಿಪಾತಾಶೌಚನಿರ್ಣಯೇ ।

ಶ್ಲೋ ॥ ಶಾವೇನ ಶುದ್ಧ್ಯತೇ ಸೂತಿ ರ್ನಸೂತಿ ಶ್ಶಾವಶೋಧಿನೀ ।
ಪೂರ್ವೇಣೈವೋತ್ತರಂ ಗಚ್ಛೇತ್.........................
ದೀರ್ಘಾದಲ್ಪಾ ವೃಜೇನ್ನಾಲ್ಪಾದ್ದೀರ್ಘ ಮಿತ್ಯಾಹ ಗೌತಮಃ ॥
ಸ್ವಕಾಲೇನೈವ ಶುದ್ಧ್ಯೇರನ್ ಸೂತಿಕಾ ಜನಕೋಗ್ನಿದಃ ।
ಜನಕಸ್ಯ ಜನನ್ಯಾಶ್ಚ ಭಾರ್ಯಾಯಾ ಭರ್ತುರೇವಚ ।
ಪುತ್ರಸ್ಯ ದುಹಿತುಶ್ಚೈವ ಶೇಷನ್ಯಾಯೋ ನವಿದ್ಯತೇ ॥

ಏತೇಷಾಂ ಪರಸ್ಪರಂ ಬಾಧ್ಯಬಾಧಕನ್ಯಾಯಂ । ಪ್ರಬಲೇನ ದುರ್ಬಲಸ್ಯ ಬಾಧೇತಿನ್ಯಾಯಂ। ತುಲ್ಯಬಲವಿರೋಧೇ ವಿಕಲ್ಪ ಇತಿ ನ್ಯಾಯಂ। ವಿಶೇಷವಿಧಿಂಚ ನಿಶ್ಚಿತ್ಯ ಸನ್ನಿಪಾತಾಶೌಚ ನಿರ್ಣಯಃ ಕರ್ತ್ತವ್ಯಃ । ಅತ್ರ ಸರ್ವತ್ರ ಪೂರ್ವತ್ವಪರತ್ವೇ। ಉತ್ಪತ್ತಿಕೃತೇ । ನತು ಜ್ಞಾನಕೃತೇ । ಸೂತಕೇ ವರ್ತ್ತಮಾನೇ, ತತ್ಸದೃಶ ಪರಿಮಾಣಂ ಸೂತಕಾಂತರಮಾಗತಂಚೇ ತ್ತಸ್ಯ ಪೂರ್ವಶೇಷೇಣೈವ ಶುದ್ಧಿಃ॥ ಶಾವೇ ವರ್ತ್ತಮಾನೇ ತತ್ಸದೃಶ ಪರಿಮಾಣಂ ಶಾವಾಂತರಂ ಸೂತಕಂವಾ ತತೋನ್ಯೂನಂವಾ ಭವೇಚ್ಚೇತ್ತದಾ ತ್ರಯಾಣಾಮಪಿ ಪೂರ್ವಶೇಷೇಣೈವ ಶುದ್ಧಿಃ ॥

ಟೀ॥ ವರ್ತ್ತಮಾನ ಜನನಾಶೌಚದಲ್ಲಿ ತತ್ಸದೃಶ ಪರಿಮಾಣ ಜನನಾಶೌಚವು ಪ್ರಾಪ್ತವಾದರೆ ಪೂರ್ವಾಶೌಚ ಶೇಷದಿಂದ ಉತ್ತರಾಶೌಚಕ್ಕೂ ನಿವೃತ್ತಿಯು. ವರ್ತ್ತಮಾನ ಶಾವಾಶೌಚದಲ್ಲಿ ತತ್ಸದೃಶ ಪರಿಮಾಣ ಅಥವಾ ತನ್ನ್ಯೂನ ಪರಿಮಾಣ ಶಾವಾಂತರವಾಗಲೀ ಬೇರೇ ಜನನಾಶೌಚವಾಗಲೀ ಪ್ರಾಪ್ತವಾದರೆ ಪೂರ್ವಶಾವಾಶೌಚ ಶೇಷದಿಂದ ಉತ್ತರಾಶೌಚಗಳಿಗೆ ಶುದ್ಧಿಯು ॥

## ವರ್ತಮಾನ ಸೂತಿಮಧ್ಯೇ ಪೂರ್ವನಿಮಿತ್ತ ಸೂತಿಶ್ರವಣೇ ತಾದೃಶಮರಣ ಶ್ರವಣೇವಾ ॥

ವರ್ತ್ತಮಾನ ಸೂತಕಮಧ್ಯೇ ಪೂರ್ವಜನನ ನಿಮಿತ್ತ ಸೂತಕಶ್ರವಣೇ ಪೂರ್ವಾಶೌಚ ಶೇಷೇಣೋತ್ತರಸ್ಯಾಪಿ ಶುದ್ಧಿಃ । ವರ್ತ್ತಮಾನ ಶಾವಾಶೌಚಮಧ್ಯೇ ಪೂರ್ವಮೃತಿ ನಿಮಿತ್ತಕಸ್ಯ ಅನತಿಕ್ರಾಂತಸ್ಯಾಶೌಚಸ್ಯ ಶ್ರವಣೇ ಅನತಿಕ್ರಾಂತ ಪೂರ್ವಶಾವಾಶೌಚ ಶೇಷೇಣೈವೋತ್ತರಸ್ಯಾಪಿ ಶುದ್ಧಿಃ ।

ಟೀ|| ಸೂತ್ಯಾಶೌಚಾನುಷ್ಠಾನಮಧ್ಯದಲ್ಲಿ ತತ್ಪೂರ್ವಜನನನಿಮಿತ್ತಕ ಸೂತಕ ಶ್ರುತವಾದರೆ ಪೂರ್ವನಿಮಿತ್ತ ಜನನಾಶೌಚ ಶೇಷದಿಂದ ಉತ್ತರಾಶೌಚಕ್ಕೂ ಶುದ್ಧಿಯು | ವರ್ತಮಾನ ಶಾವಾಶೌಚಮಧ್ಯದಲ್ಲಿ ಪೂರ್ವಮೃತಿ ನಿಮಿತ್ತಕವಾದ ಆಶೌಚವು ಅತಿಕ್ರಾಂತಾಶೌಚವಲ್ಲದಿದ್ದರೆ ಪೂರ್ವನಿಮಿತ್ತಾಶೌಚ ಶೇಷದಿಂದ ಉತ್ತರಾಶೌಚಕ್ಕೂ ಶುದ್ಧಿಯು |

ಪೂರ್ವಸ್ಯ ಅತಿಕ್ರಾಂತಸ್ಯತು ಶ್ರವಣೇದಿರ್ಘಾದಲ್ಪಮಿತಿ ವಚನೇನ ವರ್ತಮಾನ ಶಾವಾಶೌಚಶೇಷೇಣ ಅತಿಕ್ರಾಂತ ಶಾವಾಶೌಚಸ್ಯಾಪಿ ಶುದ್ಧಿಃ | ಉತ್ತರಾಘಶೇಷೇಣ ಪೂರ್ವಾಘಸ್ಯ ಶುದ್ಧ್ಯಭಾವಾ ದವಶಿಷ್ಟ ಮನುಷ್ಠೇಯ ಮಿತ್ಯನ್ಯೇ | ಯಥೋಚಿತಮತ್ರ ಗ್ರಾಹ್ಯಂ |

ಟೀ || ಅತಿಕ್ರಾಂತವಾದ ಪೂರ್ವಾಶೌಚವು ವರ್ತಮಾನವಾದ ಶಾವಾಶೌಚ ಮಧ್ಯದಲ್ಲಿ ಶ್ರುತವಾದರೆ ವರ್ತಮಾನ ಶಾವಾಶೌಚದ ಶೇಷದಿಂದ ಅತಿಕ್ರಾಂತವಾದ ಪೂರ್ವಶಾವಾಶೌಚಕ್ಕೂ ಶುದ್ಧಿಯು. ಇದು ಒಂದು ಮತವು. ಉತ್ತರಾಶೌಚ ಶೇಷದಿಂದ ಅತಿಕ್ರಾಂತವಾದ ಪೂರ್ವಾಶೌಚಕ್ಕೆ ಶುದ್ಧಿಯಿಲ್ಲವಾದುದರಿಂದ ಉತ್ತರಾಶೌಚ ಕಾಲಕ್ಕೆ ಮೇಲೆ ಮಿಕ್ಕ ಅತಿಕ್ರಾಂತಾಶೌಚವನ್ನು ಅನುಷ್ಠಿಸಬೇಕೆಂದು ಕೆಲವರ ಮತವು. ತಮ್ಮತಮ್ಮ ವೃದ್ಧಕುಲಾಚಾರದಂತೆ ವ್ಯವಸ್ಥೆಯು.

## ಗರ್ಭಪಾತನಿಮಿತ್ತ ಷಡಹಾಶೌಚೇ ಜನನ್ಯಾ ದಶಾಹಾಶೌಚ ನಿವೃತ್ತಿಃ ||

ಗರ್ಭಪಾತನಿಮಿತ್ತ ಷಡಹಾಶೌಚಶೇಷೇಣೈವ ದಶಾಹಜನನಾಶೌಚಸ್ಯಾಪಿ ಷಡಹಾಶೌಚಾನುಷ್ಠಾತ್ರ್ಯಾ ಜನನ್ಯಾಶ್ಶುದ್ಧಿಃ | ಸ್ವಾಶೌಚಸ್ಯ ಪ್ರಾಬಲ್ಯಾತ್ |

ಶ್ಲೋ || ಸ್ವಕಾಲೇಸ್ಯೈವ ಶುದ್ಧ್ಯೇರ್ದ ಸೂತಿಕಾ ಜನಕೋಗ್ನಿದಃ |
ಇತ್ಯುಕ್ತತ್ವಾಚ್ಚ ವಿಷಯೋಽಯಮಗ್ರೇ ಸ್ಪಷ್ಟಂ ವಕ್ಷ್ಯತೇ ||

ಟೀ || ಗರ್ಭಪಾತ ನಿಮಿತ್ತವಾದ ಆರುದಿನಾಶೌಚಾನುಷ್ಠಾನವುಳ್ಳ ತಾಯಿಗೆ ಈ ಆರುದಿನ ಜನನಾಶೌಚದೊಳಗೆ ಬೇರೆ ಹತ್ತುದಿನದ ಜನನಾಶೌಚವು ಪ್ರಾಪ್ತವಾದರೂ ತನ್ನ ಆಶೌಚಕಾಲವಾದ ಆರು ದಿನದಲ್ಲೇ ಬೇರೆಯಾದ ಹತ್ತು

ಅನುಷ್ಠಾನ ಮಾಡತಕ್ಕದ್ದು ಯುಕ್ತವಾಗಿ ಕಾಣುತ್ತದೆ. ಮತ್ತು ಇದೇರೀತಿ ತ್ರಿರಾತ್ರ, ಪಕ್ಷಿಣೀ, ದಿನಾಶೌಚಗಳು ಸಹ ಬಂದರಲ್ಲೊಂದು ಅಜ್ಞಾತವಾಗಿ ಕಳೆದುಹೋಗಿದ್ದರೂ, ಆ ತ್ರಿರಾತ್ರಾದಿಗಳಿಗೆ ಸ್ವಸ್ವಕಾಲಾತಿಕ್ರಮದಲ್ಲಿ ಸದ್ಯಶ್ಶುದ್ಧಿಯು ಉಕ್ತವಾಗಿರುವುದರಿಂದ ಶ್ರವಣಾನಂತರ ಅಜ್ಞಾತವಾಗಿ ಹಿಂದೆ ಕಳೆದುಹೋದ ಆಶೌಚ ನಿಮಿತ್ತವಾಗಿ ಒಂದು ಸ್ನಾನವಾದರೂ ಬಂದೇಬರುವುದೆಂದು ತೋರುತ್ತದೆ. ಶಿಷ್ಟರ ಅಭಿಪ್ರಾಯದಂತೆ ಅಲ್ಲಲ್ಲಿಯೇ ವಿಮರ್ಶೆಮಾಡಿಕೊಳ್ಳಬೇಕು.

## ॥ ಆಶೌಚಾಂತ್ಯದಿನೇ ಅನ್ಯಾಶೌಚಸಂಭವೇ ॥

ಪೂರ್ವಶಾವಸ್ಯ ಸೂತಕಸ್ಯವಾ ಅಂತ್ಯದಿನೇ ತತ್ಸದೃಶ ಪರಿಮಾಣಂ ಸಜಾತೀಯಂ ಶಾವಂ ಸೂತಕಂವಾ ಸ್ಯಾಚ್ಚೇತ್ತದಾ ತದರ್ಥಂ ಪುನರಪಿ ದ್ವ್ಯಹಮಘಂ | ಪೂರ್ವಾಶೌಚಸ್ಯಾಂತ್ಯಯಾಮೇ ಆಶೌಚಾಪಗಮದಿನ ಪ್ರಭಾತೇವಾ ಪ್ರಾಪ್ತಂಚೇತ್ತದಾ ಪೂರ್ವಾಘತಃ ಪರಂ ತ್ರ್ಯಹಂ |

ಶ್ಲೋ ॥ ಪೂರ್ವಸ್ಯಾಂತದಿನೇತಚ್ಚೇತ್ ದ್ವ್ಯಹಂ ಪೂರ್ವಾಘತಃ ಪರಂ |
ಪ್ರಭಾತೇ ವಾಂತ್ಯಯಾಮೇವಾ ತ್ರ್ಯಹಂ ಪೂರ್ವಾಘತಃ ಪರಂ ॥

ಇತ್ಯುಕ್ತತ್ವಾತ್ ಅಯಂಚ ವಿಶೇಷ ಸ್ಸಂಪೂರ್ಣಾಶೌಚ ಸನ್ನಿಪಾತವಿಷಯೋ ದ್ರಷ್ಟವ್ಯಃ | ಅರುಣೋದಯಾತ್ಪಶ್ಚಾತ್ ಸೂರ್ಯೋದಯಾತ್ಪೂರ್ವಂ ಯೋಮಧ್ಯಮಃ ಕಾಲಃ ಸಃ ಪ್ರಭಾತಶಬ್ದಾರ್ಥ ಇತಿ ಶತಕಕಾರೈರ್ನಿರ್ಧಾರಿತಃ | ಗೌತಮಸೂತ್ರೇ ಮಸ್ಕರೀಭಾಷ್ಯೇ ಏಕಾದಶಾಹೇ ಉದಯಾತ್ಪರಂ ಸಂಗವಕಾಲಪರ್ಯಂತ ಬೋಧಕಃ ಪ್ರಭಾತಶಬ್ದ ಇತಿ ॥ ಶ್ಲೋ ॥ ರಾತ್ರಿಶೇಷೇ ದ್ವ್ಯಹಾಚ್ಛುದ್ಧಿರ್ಯಾಮಶೇಷೇ ತ್ರ್ಯಹಾಚ್ಛುಚಿರಿತಿ ಶಾತಾತಪೋಕ್ತೇಃ ॥ ಪೂರ್ಣಾಶೌಚಾಂತ್ಯದಿನೇ ಪರದಿನಪ್ರಭಾತೇವಾ ಪ್ರಾಪ್ತಸ್ಯಾಲ್ಪಾಶೌಚಸ್ಯತು ಪೂರ್ವಾಶೌಚ ಶೇಷೇಣೈವ ಶುದ್ಧಿಃ | ನಪೃಥಕ್ ದ್ವ್ಯಹಾದಿಕಂ |

ಶ್ಲೋ ॥ ತ್ರ್ಯಹಂ ಪೂರ್ವಾಂತ್ಯಯಾಮೇಚ ತತ್ಪ್ರಭಾತೇ ಭವಾಯದಿ |
ದೀರ್ಘಾದಲ್ಪಂ ವ್ರಜೇನ್ನಾಲ್ಪಾ ದ್ದೀರ್ಘ ಮಿತ್ಯಘಸಂಹತೌ ॥

ಪ್ರಭಾತೇಂತ್ಯದಿನೇ ಪ್ರಾಪ್ತಮಪ್ಯತ್ಯಲ್ಪಂಹಿ ದೀರ್ಘ ಇತಿ ವೈದ್ಯನಾಥದೀಕ್ಷಿತೈರಪ್ಯುಪಪಾದಿತಂ |

ಟೀ ॥ ಪೂರ್ವಪ್ರಾಪ್ತವಾದ ಸೂತ್ಯಾಶೌಚಕ್ಕಾಗಲೀ ಶಾವಾಶೌಚಕ್ಕಾಗಲೀ ಅಂತ್ಯವಾದ ಹತ್ತನೇ ದಿನದಲ್ಲಿ ತತ್ಸಮಾನಕಾಲೀನವಾದ ಸೂತ್ಯಾಶೌಚ

ವಾಗಲೀ ಶಾವಾಶೌಚವಾಗಲೀ ಪ್ರಾಪ್ತವಾದರೆ ಎರಡನೇ ಆಶೌಚಕ್ಕೋಸ್ಕರ ಪೂರ್ವಾಶೌಚದ ನಿವೃತ್ತಿಯಮೇಲೆ ಎರಡುದಿನ ಹೆಚ್ಚಾಗಿ ಆಶೌಚವುಂಟು. ಪೂರ್ವಾಶೌಚ ದಿನದ ಅಂತ್ಯವಾದ ಹತ್ತನೇದಿನ ರಾತ್ರಿ ಕೊನೆಯ ಯಾಮದಲ್ಲಾಗಲೀ, ಹನ್ನೊಂದನೇದಿನದ ಪ್ರಾತಃ ಸಂಗವ ಕಾಲದೊಳಗಾಗಲೀ ಸದೃಶವಾದ ಮತ್ತೊಂದಾಶೌಚವು ಪ್ರಾಪ್ತವಾದರೆ ಪೂರ್ವಾಶೌಚಾನಂತರದಲ್ಲಿ ಮೂರು ದಿನ ಹೆಚ್ಚಾಗಿರಬೇಕು. ಅರುಣೋದಯಾನಂತರ ಸೂರ್ಯೋದಯಾತ್ಪೂರ್ವ ಕಾಲಕ್ಕೆ ಪ್ರಭಾತವೆಂದು ಶತಕಕಾರರ ಮತವು. ಹನ್ನೊಂದನೆಯ ದಿನ ಪ್ರಾತಃ ಆರು ಘಳಿಗೆಯವರೆಗೂ ಪ್ರಭಾತವೆಂದು ಗೌತಮಸೂತ್ರ ಮಸ್ಕರೀಭಾಷ್ಯದಲ್ಲಿ ಹೇಳಿದ್ದಾರೆ. ಆದ್ದರಿಂದ ದಶಮದಿನ ರಾತ್ರಿ ನಾಲ್ಕನೇ ಯಾಮಾದಿಯಲ್ಲಾಗಲೀ, ಹನ್ನೊಂದನೇ ದಿವಸದ ಸೂರ್ಯೋದಯಾತ್ಪೂರ್ವದಲ್ಲಾಗಲೀ, ಹನ್ನೊಂದನೇ ದಿವಸ ಪ್ರಾತಃ ಆರು ಘಳಿಗೆಯೊಳಗಾಗಲೀ ಸಮಾನಾಶೌಚಾಂತರವು ಪ್ರಾಪ್ತವಾದರೆ "ಪ್ರಭಾತೇ ವಾಂತ್ಯಯಾಮೇವಾ" ಎಂಬ ವಚನಕ್ಕೆ ವಿಷಯವು. ಹತ್ತನೇ ದಿನದಲ್ಲಿ ಪ್ರಾಪ್ತವಾದರೆ ಅದಕ್ಕೆ ಮೇಲೆ ಎರಡು ದಿನವು. ಹತ್ತನೇ ದಿನ ರಾತ್ರಿ ಕೊನೆಯ ಯಾಮದಲ್ಲೂ, ಹನ್ನೊಂದನೇದಿನ ಪ್ರಾತಃಕಾಲದಲ್ಲೂ ಪ್ರಾಪ್ತವಾದರೆ ಮೂರುದಿನವೂ ಹೆಚ್ಚಾಗಿ ಆಶೌಚವುಂಟೆಂದು ತಾತ್ಪರ್ಯವು. ಈ ಎರಡು ಮೂರುದಿನ ಹೆಚ್ಚು ಆಶೌಚಗಳು ಪೂರ್ಣಾಶೌಚ ಸನ್ನಿಪಾತಗಳಿಗೆ ಮಾತ್ರ. ದಶಾಹಾಶೌಚಾಂತ್ಯ ದಿನದಲ್ಲಿ ತ್ರ್ಯಹಾಶೌಚಾದಿಗಳು ಪ್ರಾಪ್ತವಾದರೆ ಪೂರ್ವಶೇಷದಿಂದಲೇ ಶುದ್ಧಿಯು. ದ್ವ್ಯಹ ತ್ರ್ಯಹಾದಿ ಪೃಥಗನುಷ್ಠಾನವಿಲ್ಲ,

## ಸ್ವಲ್ಪಾಶೌಚಮಧ್ಯೇ ದೀರ್ಘಾಶೌಚಸನ್ನಿಪಾತೇ ||

ಸ್ವಲ್ಪಕಾಲಾಶೌಚಮಧ್ಯೇ ದೀರ್ಘಕಾಲಾಶೌಚ ಸಂಭವೇತು, ನಪೂರ್ವಶೇಷೇಣ ಶುದ್ಧಿಃ ; ಕಿಂತು ದೀರ್ಘಾಶೌಚ ಶೇಷೇಣೈವ | ಸಮಾನೋದಕ ಸಪಿಂಡಾಶೌಚಯೋಗೇ ಅನುಪನೀತೋಪನೀತಾಶೌಚ ಯೋಗೇವಾ ಗುಣಾಶೌಚಸ್ಯ ಕಲ್ಪಃ ನಿಷಿದ್ಧತ್ವಾತ್, "ದೀರ್ಘಾದಲ್ಪಂ ವ್ರಜೇನ್ನಾಲ್ಪಾದ್ದೀರ್ಘಮಿತ್ಯಾಹ ಗೌತಮಃ" | ಇತಿ ಶತಕವ್ಯಾಖ್ಯಾನೇ ಉಕ್ತಂ | ತಥೈವಾಘುವಿವೇಚನೇಚ | ಸರ್ವತ್ರಶಾವಂ ಸೂತಕಂವಾ ಪಶ್ಚಾದಾಗತ ಮಧಿಕಪರಿಮಾಣಂಚೇ ತ್ಪೂರ್ವಶೇಷೇಣ ನನಿವರ್ತತೇ | ತಸ್ಯ ಸ್ವಕಾಲತಏವ ನಿವೃತ್ತಿರಿತ್ಯುಕ್ತಂ |

ಟೀ॥ ಸಮಾನೋದಕ ಸಪಿಂಡಾಶೌಚಯೋಗದಲ್ಲೂ ಅನುಪನೀತ, ಉಪನೀತಾಶೌಚ ಯೋಗದಲ್ಲೂ ಕಲಿಯುಗದಲ್ಲಿ ಗುಣಾಶೌಚಕ್ಕೆ ನಿಷೇಧಬಂದಿರುವುದರಿಂದ ಸ್ವಲ್ಪಕಾಲಾಶೌಚದಲ್ಲಿ ದೀರ್ಘಕಾಲಾಶೌಚವು ಪ್ರಾಪ್ತವಾದರೆ ಪೂರ್ವಾಶೌಚಶೇಷದಿಂದ ಉತ್ತರಾಶೌಚಕ್ಕೆ ಶುದ್ಧಿಯಿಲ್ಲವು. ಶತಕವ್ಯಾಖ್ಯಾನದಲ್ಲೂ ಅಘವಿವೇಚನದಲ್ಲೂ ಹೀಗೆಯೇ ಹೇಳಲ್ಪಟ್ಟಿದೆ. ದೀರ್ಘಾಶೌಚವು ಸ್ವಕಾಲದಿಂದಲೇ ನಿವೃತ್ತಿಯು.

## ॥ ಸೂತಕಮಧ್ಯೇ ಶಾವಪ್ರಾಪ್ತೌ ॥

ಸೂತಕಮಧ್ಯೇ ತನ್ನ್ಯೂನಕಾಲಸ್ಯ ತತ್ಸಮಕಾಲಸ್ಯವಾ ಶಾವಾಶೌಚಸ್ಯ ಸನ್ನಿಪಾತೇ ನಸೂತಕಶೇಷೇಣ ಶಾವಸ್ಯ ಶುದ್ಧಿಃ । ಕಿಂತು ಶಾವಾಶೌಚ ಶೇಷೇಣೈವ। ಸೂತಿಮಧ್ಯೇ ಶಾವಸಮಾಪ್ತಿಶ್ಚೇತ್ ಶಾವೇನ ಸೂತೇರಪಿ ಶುದ್ಧಿಃ। ಇದಂ ಪ್ರಾಗುಕ್ತಂ । ಸ್ಪಷ್ಟಾರ್ಥಂ ಪುನರುಕ್ತಿಃ ।

ಟೀ ॥ ಜನನಾಶೌಚ ಮಧ್ಯದಲ್ಲಿ ಅದಕ್ಕೆ ಕಡಮೆಯಾದ ಕಾಲವೂ, ಅಥವಾ ಅದಕ್ಕೆ ಸಮಕಾಲವೂ ಆದ ಶಾವಾಶೌಚವು ಪ್ರಾಪ್ತವಾದರೆ ಪೂರ್ವಸೂತ್ಯಾಶೌಚ ಶೇಷದಿಂದ ಉತ್ತರಶಾವಾಶೌಚಕ್ಕೆ ಶುದ್ಧಿಯಿಲ್ಲವು. ಶಾವಾಶೌಚವು ಸ್ವಕಾಲದಿಂದಲೇ ಶುದ್ಧಿಯು. ಸೂತ್ಯಾಶೌಚ ಮಧ್ಯದಲ್ಲಿ ಶಾವಾಶೌಚವೇ ಮುಗಿಯುವುದಾದರೆ ಈ ಶಾವಾಶೌಚದಿಂದಲೇ ಸೂತ್ಯಾಶೌಚವೂ ನಿವೃತ್ತಿಯಾಗುವುದು. ಇದು ಪೂರ್ವದಲ್ಲಿ ಹೇಳಲ್ಪಟ್ಟಿದ್ದಾಗ್ಯೂ ಸ್ಪಷ್ಟಾರ್ಥವಾಗಿ ಪುನಃ ಬರೆಯಲ್ಪಟ್ಟಿತು.

## ತ್ರಿರಾತ್ರ ಜನನಮರಣಾಶೌಚೇ ದಶಾಹ ಜನನಮರಣಾಶೌಚಪ್ರಾಪ್ತೌ ॥

ತ್ರಿರಾತ್ರ ಜನನಾಶೌಚೇ ಮರಣಾಶೌಚೇವಾ ಪ್ರಕ್ರಾಂತೇ ದಶಾಹ ಜನನಾಶೌಚಂ ಮರಣಾಶೌಚಂವಾ ಯದಿ ಪ್ರವಿಶೇತ್, ತದಾ ಪಶ್ಚಿಮಶಾವಾಶೌಚಸಮಾಪ್ತ್ಯಾಶುದ್ಧಿಃ ॥

ಟೀ ॥ ತ್ರಿರಾತ್ರ ಜನನಮರಣಾಶೌಚಾನುಷ್ಠಾನ ಮಧ್ಯದಲ್ಲಿ ದಶರಾತ್ರ ಸೂತಕ ಶಾವಗಳು ಸಂಭವಿಸಿದರೆ ಎರಡನೆಯಸಲ ಪ್ರಾಪ್ತವಾದ ಶಾವಾಶೌಚ

ದಿಂದ ಪೂರ್ವಾಶೌಚಗಳಿಗೆ ನಿವೃತ್ತಿಯು. ಉತ್ತರಾಶೌಚವು ದೀರ್ಘಕಾಲವಾದುದರಿಂದ ಪೂರ್ವಾಶೌಚದಿಂದ ಉತ್ತರಾಶೌಚಕ್ಕೆ ನಿವೃತ್ತಿಯಿಲ್ಲವು ಎಂದು ತಾತ್ಪರ್ಯವು.

[*N.B.*—ಇದು ಹ್ರಸ್ವಜಾತಾಶೌಚ ಮಧ್ಯದಲ್ಲಿ ಸಂಭವಿಸಿದ ದೀರ್ಘಮರಣಾಶೌಚವಿಷಯವು. ಹ್ರಸ್ವಮರಣಾಶೌಚ ಮಧ್ಯದಲ್ಲಿ ದೀರ್ಘಜಾತಾಶೌಚವು ಪ್ರಾಪ್ತವಾದಾಗ ಆಶೌಚಾನುಷ್ಠಾನ ಕ್ರಮವು ಮುಂದಿನ ಪುಟದಲ್ಲಿ ವಿವರಿಸಲ್ಪಟ್ಟಿದೆ.]

## ॥ ಏಕಾಹಾಶೌಚೇ ತ್ರಿದಿನಾಶೌಚಪ್ರಾಪ್ತೌ ॥

ಪ್ರಕ್ರಾಂತೈಕರಾತ್ರಾಶೌಚ ಮಧ್ಯೇ ತ್ರಿರಾತ್ರಾಶೌಚಮಾಗಚ್ಛೇ ತ್ತದಾ ವೃದ್ಧಿಮದಾಶೌಚಂ ಸ್ವಕಾಲೇನೈವ ಶುಧ್ಯತಿ । ಏಕರಾತ್ರ ಶಾವಾಶೌಚೇ ತ್ರಿರಾತ್ರ ಶಾವಾಶೌಚಂ ನಗಚ್ಛತೀತ್ಯರ್ಥಃ । ಏಕರಾತ್ರಶಾವೇ ತ್ರಿರಾತ್ರ ಸೂತ್ಯಾಶೌಚಪ್ರಾಪ್ತೌ ಅಗ್ರೇ ವಕ್ಷ್ಯತೇ ।

ಟೀ॥ ಏಕರಾತ್ರ ಶಾವಾಶೌಚದಲ್ಲಿ ತ್ರಿರಾತ್ರ ಶಾವಾಶೌಚ ಬಂದರೆ ತ್ರಿರಾತ್ರಾಶೌಚಕ್ಕೆ ಪೂರ್ವಾಶೌಚದಿಂದ ಶುದ್ಧಿಯಿಲ್ಲವು. ಏಕಾಹಶಾವದಲ್ಲಿ ತ್ರಿರಾತ್ರ ಸೂತಿಬಂದರೆ ಮುಂದೆ ಈ ವಿಷಯವು ಹೇಳಲ್ಪಡುವುದು.

## ॥ ಸ್ವಲ್ಪಶಾವಮಧ್ಯೇ ದೀರ್ಘಸೂತಕ ಸನ್ನಿಪಾತೇ ॥

ಸ್ವಲ್ಪಶಾವಮಧ್ಯೇ ದೀರ್ಘಸೂತಕ ಸನ್ನಿಪಾತೇ ನಪೂರ್ವೇಣಶುದ್ಧಿಃ । ಪರೇಣೈವೇತ್ಯಾಹ । ತಥಾಹಿ ।

ಶ್ಲೋ॥ ಯಥಾ ತ್ರಿರಾತ್ರೇ ಪ್ರಕ್ರಾಂತೇ ದಶಾಹಂ ಪ್ರವಿಶೇದ್ಯದಿ ।
ನಪೂರ್ವೇಣ ವಿಶುದ್ಧಿಸ್ಸ್ಯಾ ತ್ಸ್ವಕಾಲೇನೈವ ಶುದ್ಧ್ಯತಿ ॥
ಸ್ವಲ್ಪಕಾಲೇ ಮೃತಾಶೌಚೇ ದೀರ್ಘಂವಾ ಜಾತಕಂ ಭವೇತ್ ।
ಸ್ವಲ್ಪಕಾಲೇನ ಶುದ್ಧಿರ್ನ ದೀರ್ಘೇಣೈವ ವಿಶುದ್ಧ್ಯತಿ ॥

ಕಿಂಚ ॥ ಷಡಶೀತೌ—

ಶ್ಲೋ॥ ಸ್ವಭಾವಬಹುಸೂತಿಸ್ತು ನ್ಯೂನಶಾವ ವಿಶೋಧಿನೀ ।
ಇತಿಚ ಸೂತ್ಯಾಶೌಚಸ್ಯ ಕಾಲತೋಗರೀಯಸ್ತ್ವಂ ॥
ಶ್ಲೋ॥ ಶಾವೇನ ಶುಧ್ಯತೇಸೂತಿ ರ್ನಸೂತಿ ಶ್ಶಾವಶೋಧಿನೀ ।

" ಗರೀಯೋಮರಣಂ ಭವೇತ್ " ಇತ್ಯಾದಿನಾ ಶಾವಸ್ಯ ಸ್ವರೂಪತೋ ಗರೀಯಸ್ತ್ವಂ ಚೋಕ್ತಂ| ಕಿಂಚ |

ಶ್ಲೋ || ತ್ರಿರಾತ್ರ ಮೃತಿಮಧ್ಯೇತು ದಶಾಹಂ ಜಾತಕಂ ಭವೇತ್ |
ಮೃತಕೇನ ನಶುದ್ಧಿಸ್ಸ್ಯಾ ತ್ಸ್ವಕಾಲೇನೈವ ಶುಧ್ಯತಿ ||

ಇತಿ ವ್ಯಾಸವಚನಸ್ಯಾಪಿ ಉತ್ತರಾರ್ಧೇ—

ಶ್ಲೋ || ಮೃತಾಶೌಚೇನ ಶುದ್ಧಿಸ್ಸ್ಯಾ ದಿತ್ಯಾಹ ಭಗವಾನ್ ಯಮಃ |

ಇತಿ ಪಾಠಭೇದೋಪಿ ಕೋಶೇಷು ದೃಶ್ಯತೇ | ಉಭಯಥಾ ವಚನಸತ್ವಾತ್ತುಲ್ಯಬಲವಿರೋಧೇ ವಿಕಲ್ಪ ಇತಿ ನ್ಯಾಯೇನ ಲೋಕೇ ಉಭಯಥಾ ವ್ಯಾಚಾರ ದರ್ಶನಾಚ್ಚ ಯಥಾದೇಶಕುಲಾಚಾರಂ ವ್ಯವಸ್ಥಾ ಜ್ಞಾತವ್ಯಾ | ತಥಾಪ್ಯಾಂತರತಮ್ಯ ಪರೀಕ್ಷಾಯಾಂ " ಗರೀಯೋಮರಣಂ ಭವೇತ್ " ಇತಿಪಕ್ಷಃ ಬಹುಭಿರನುಷ್ಠೀಯತ ಇತಿ ಪ್ರತಿಭಾತಿ | ಪೂರ್ವೋಕ್ತ ವಚನನಿಚಯೈ ರೇವಮುಕ್ತಂ ಭವತಿ | ಯಥಾ ಪ್ರಕ್ರಾಂತ ತ್ರಿರಾತ್ರಾಶೌಚೇ ದಶಾಹ ಸೂತ್ಯಾಶೌಚ ಪ್ರಾಪ್ತೌ ಶಾವಾಶೌಚಶೇಷೇಣ ಸೂತ್ಯಾಶೌಚಸ್ಯಾಪಿ ಶುದ್ಧಿರಿತಿ ವೈದ್ಯನಾಥ ಶತಕ ಕಾರಯೋಃ ಪಕ್ಷಃ | ಶಾವಾನಂತರಂ ಸೂತಿ ಸ್ಸ್ವಕಾಲಪರ್ಯಂತ ಮನುಷ್ಠೇಯೇತಿ ಷಡಶೀತಿಕಾರ ಪಕ್ಷಃ || ಏವಂ ಪ್ರಕ್ರಾಂತ ಬಹುಸೂತಿಮಧ್ಯೇ ನವಮ ದಿನೇ ತ್ರಿರಾತ್ರ ಶಾವಪ್ರಾಪ್ತೌ ಸೂತ್ಯಪಗಮ ದಿನಏವ ಸ್ವಲ್ಪಶಾವಸ್ಯಾಪಿ ಶುದ್ಧಿರಿತ್ಯೇಕೇ | ಶಾವಂ ಪೃಥಗನುಷ್ಠೇಯಮಿತ್ಯನ್ಯೇ | ಏವಂ ಪಕ್ಷದ್ವಯ ಮುಕ್ತಪ್ರಸ್ನಂ |

ಟೀ || ಅಲ್ಪಕಾಲ ಶಾವಾಶೌಚದಲ್ಲಿ ದೀರ್ಘಕಾಲ ಜನನಾಶೌಚವು ಪ್ರಾಪ್ತವಾದರೆ ಶಾವಾಶೌಚದಿಂದ ಸೂತ್ಯಾಶೌಚಕ್ಕೂ ಶುದ್ಧಿಯೆಂದು ಶತಕ ಕಾರರ ಮತ್ತು ವೈದ್ಯನಾಥರ ಮತವು. ಶಾವಾಶೌಚಾನಂತರ ಸೂತ್ಯಾಶೌಚವನ್ನು ಸ್ವಕಾಲದವರೆಗೆ ಅನುಷ್ಠಾನ ಮಾಡಬೇಕೆಂದು ಷಡಶೀತಿಕಾರರ ಮತವು. ಲೋಕದಲ್ಲಿ ಬಹುಶಿಷ್ಟರು ಶಾವಾಶೌಚಕ್ಕೆ ಪ್ರಾಧಾನ್ಯವನ್ನೂ ಕೆಲವು ಶಿಷ್ಟರು ಸೂತ್ಯಾಶೌಚಕ್ಕೆ ಪ್ರಾಧಾನ್ಯವನ್ನೂ ಕೊಟ್ಟುಕೊಂಡು ಉಭಯವಿಧಾಚಾರವನ್ನೂ ನಡೆಸಿಕೊಂಡು ಬರುವುದರಿಂದ ಸ್ವಸ್ವಕುಲಾಚಾರರೀತ್ಯಾ ಅನುಷ್ಠಾನ ಮಾಡಬೇಕು.

## ॥ ಜ್ಞಾತ್ಯಘಮಧ್ಯೇ ಪಿತ್ರೋರ್ಮೃತಿವಿಷಯಃ ॥

ಜ್ಞಾತ್ಯಘಮಧ್ಯೇ ಪಿತ್ರೋರ್ಮೃತಿಶ್ರುತೌ ಮಾತೃಮರಣಾಶೌಚ ಮಧ್ಯೇ ಪಿತುರ್ಮೃತಿರ್ಶ್ವಾ ಶ್ರುತಾಚೇತ್ ಪಿತೃಮರಣಾದಿ ದಶಾಹಂ । ಪಿತೃಮೃತಿಮಧ್ಯೇ ಮಾತೃಮರಣೇ ಪಿತ್ರಾಶೌಚ ಸಮಾಪ್ತ್ಯನಂತರಂ ಮಾತೃನಿಮಿತ್ತಂ. ಪಕ್ಷಿಣ್ಯಾಶೌಚಂ ಪೃಥಗನುಷ್ಠೇಯಂ । ನತು ದಶಾಹಂ । ಅನುಮರಣೇತು ಮಾತುರ್ನ ಪೃಥ ಕ್ಪಕ್ಷಿಣ್ಯಾಶೌಚಂ । ಕಿಂತು । ಪಿತೃಮರಣಾಶೌಚಾದೇವ ಶುದ್ಧಿಃ । ಪಿತುಸ್ಸನ್ಯಾಸೇ ದುರ್ಮರಣೇವಾ ಮಾತುರ್ನಪಕ್ಷಿಣೀಮಾತ್ರಂ । ಕಿಂತ್ವಾಧಿಕ್ಯಾತ್ ಮಾತೃಮರಣಾದಾರಭ್ಯ ಪೂರ್ಣಾಶೌಚಂ । ಪಿತೃಮೃತಿಮಧ್ಯೇ ಮಾತುರ್ದುರ್ಮ ರಣೇ ತತ್ಕ್ರಿಯಾಯಾ ಸ್ಸಾವಕಾಶತ್ವಾ ನ್ನಪಕ್ಷಿಣೀ । ಕ್ರಿಯಾರಂಭಕಾಲೇ ಮಾತುರ್ದಶಾಹಮೇವ । ಸದ್ಯಃ ಕರಣಪಕ್ಷೇ ಮಾತುಃ ಪೃಥಕ್ಪಕ್ಷಿಣೀ ಭವ ತ್ಯೇವ । ಇತಿ ಷಡಶೀತಿಕಾರಾಃ ।

ಟೀ ॥ ಜ್ಞಾತ್ಯಾಶೌಚ ಮಧ್ಯದಲ್ಲಾಗಲೀ ಮಾತೃಮರಣಾಶೌಚ ಮಧ್ಯ ದಲ್ಲಾಗಲೀ ಪಿತೃಮರಣವಾದರೆ ಪಿತ್ರಾಶೌಚದಿಂದಲೇ ಈ ಎರಡಕ್ಕೂ ಶುದ್ಧಿಯು. ಪಿತೃವಿನ ಮರಣಮಧ್ಯದಲ್ಲಿ ಮಾತೃವಿನ ಮರಣವುಂಟಾದರೆ ಪಿತ್ರಾಶೌಚಾನಂತರ ಮಾತ್ರಾಶೌಚವನ್ನು ಪಕ್ಷಿಣೀಕಾಲ ಬೇರೆ ಅನುಷ್ಠಾನ ಮಾಡಬೇಕು. ಸಹ ಗಮನವಾದ ಪಕ್ಷದಲ್ಲಿ ಪಿತ್ರಾಶೌಚದಿಂದಲೇ ಮಾತ್ರಾಶೌಚಕ್ಕೂ ಶುದ್ಧಿಯು. ಪೃಥಕ್ಪಕ್ಷಿಣೀ ಇಲ್ಲ. ತಂದೆಯು ಸನ್ಯಾಸಮಾಡಿಕೊಂಡಾಗಲೀ, ಅಥವಾ ದುರ್ಮ ರಣದಿಂದಲಾಗಲೀ ಮೃತನಾಗಿದ್ದರೆ ಮಾತೃವಿಗೆ ಪಕ್ಷಿಣೀ ಮಾತ್ರವಲ್ಲ. ಮಾತೃ ಮರಣಾದಿ ಪೂರ್ಣಾಶೌಚವು. ಪಿತೃಮರಣ ಮಧ್ಯದಲ್ಲಿ ಮಾತೃವು ದುರ್ಮೃತಿ ಯನ್ನು ಹೊಂದಿದರೆ ಪೃಥಕ್ಪಕ್ಷಿಣೀ ಇಲ್ಲ, ಕಾಲಾಂತರದಲ್ಲಿ ಪ್ರಾಯಶ್ಚಿತ್ತ ಪೂರ್ವಕವಾಗಿ ಕ್ರಿಯಾ ಮಾಡುವ ಕಾಲದಲ್ಲಿ ದಶಾಹಾಶೌಚವೇ । ತತ್ಕಾಲ ದಲ್ಲೇ ಪ್ರಾಯಶ್ಚಿತ್ತ ಪೂರ್ವಕವಾಗಿ ಮಾತೃವಿಗೂ ಕ್ರಿಯಾ ಮಾಡುವಪಕ್ಷೇ ಪಿತ್ರಾಶೌಚಾನಂತರ ಮಾತ್ರಾಶೌಚವು ಪಕ್ಷಿಣೀ ಉಂಟೇವುಂಟು. ಈ ರೀತಿ ಷಡ ಶೀತಿಕಾರರು ಹೇಳಿದ್ದಾರೆ.

## ॥ ಸನ್ನಿಪಾತಾಶೌಚೇ ವಿಶೇಷಃ ॥

ಸ್ಮೃತಿಮುಕ್ತಾಫಲೇ—

ಶ್ಲೋ || ಜನಕಸ್ಯ ಜನನ್ಯಾಶ್ಚ ಭಾರ್ಯಾಯಾ ಭರ್ತುರೇವಚ |
ಪುತ್ರಸ್ಯ ದುಹಿತುಶ್ಚೈವ ಜನನೇ ಮರಣೇಪಿಚ ||
ಸ್ವಕಾಲೇನೈವಶುದ್ಧಿಸ್ಸ್ಯಾ ಚ್ಛೇಷನ್ಯಾಯೋ ನವಿದ್ಯತೇ |

**ಸಂಗ್ರಹೇ—**

ಶ್ಲೋ || ಸ್ವಕಾಲೇನೈವ ಶುದ್ಧ್ಯೇರನ್ ಸೂತಿಕಾ ಜನಕೋಗ್ನಿದಃ |
ಇತ್ಯಾದಿ ವಿಶೇಷವಿಧಿಮನುಸೃತ್ಯ ಕಾನಿಚಿತ್ಸನ್ನಿಪಾತಾಶೌಚಾನಿ ಲಿಖ್ಯಂತೇ ||

ಟೀ || ಸನ್ನಿಪಾತಾಶೌಚ ವಿಷಯದಲ್ಲಿ ವಿಶೇಷ ವಿಧಿಯನ್ನನುಸರಿಸಿ ಕೆಲವು ಆಶೌಚಭೇದಗಳು ಬರೆಯಲ್ಪಡುವುವು- ಹೇಗೆಂದರೆ:—

**|| ಜ್ಞಾತ್ಯಘಮಧ್ಯೇ ಪುತ್ರಜನನೇ ಪುತ್ರೀಜನನೇವಾ ||**

ಶ್ಲೋ || ಜನಕಸ್ಯ ಜನನ್ಯಾಶ್ಚ ಭಾರ್ಯಾಯಾ ಭರ್ತುರೇವಚ |
ಪುತ್ರಸ್ಯ ದುಹಿತುಶ್ಚೈವ ಜನನೇ ಮರಣೇಪಿಚ ||
ಸ್ವಕಾಲೇನೈವ ಶುದ್ಧಿಸ್ಸ್ಯಾ ಚ್ಛೇಷನ್ಯಾಯೋ ನವಿದ್ಯತೇ |

ಇತಿ ವಚನಸ್ಯ ವೈದ್ಯನಾಥದೀಕ್ಷಿತೈ ರ್ವಕ್ಷ್ಯಮಾಣರೀತ್ಯಾ ವ್ಯಾಖ್ಯಾತಂ | ಯಥಾ-ಜನಕಸ್ಯ- ಜನನ್ಯಾಃ-ಭಾರ್ಯಾಯಾಃ - ಭರ್ತುಶ್ಚ-ಏಷಾಂ ಅನ್ಯತಮ ಮರಣೇ ತತ್ಪ್ರತಿಯೋಗಿನಾಂ | ಪುತ್ರಸ್ಯ ದುಹಿತುಶ್ಚ ಜನನೇ ತತ್ಪಿತ್ರೋಃಶ| ಸ್ವಕಾಲೇನೈವ ಶುದ್ಧಿರ್ಭವತಿ | ನಾನ್ಯಾಶೌಚಶೇಷೇಣ | ಇತ್ಯುಕ್ತತ್ವಾತ್ ಚ ತದುಕ್ತ ನ್ಯಾಯಮನುಸೃತ್ಯ ಕಾನಿಚಿತ್ಸನ್ನಿಪಾತಾಶೌಚಾನಿ ಲಿಖ್ಯಂತೇ |

ಟೀ || "ಜನಕಸ್ಯ ಜನನ್ಯಾಶ್ಚ" ಎಂಬ ವಚನಕ್ಕೆ ವೈದ್ಯನಾಥದೀಕ್ಷಿತರು ವ್ಯಾಖ್ಯಾನ ಮಾಡಿರುವುದೇನಂದರೆ:—ತಂದೆ, ತಾಯಿ, ಹೆಂಡತಿ, ಗಂಡ, ಇವರುಗಳ ಮರಣದಲ್ಲಿ ಅವರಿಗೆ ಪ್ರತಿಯೋಗಿಗಳಾದ ಮಗನಿಗೂ, ದಂಪತಿಗಳಿಗೂ ಪರಸ್ಪರವಾಗಿ ಮರಣವುಂಟಾದರೂ ಮತ್ತು ಮಗ, ಮಗಳು ಇವರ ಜನನದಲ್ಲೂ ತತ್ಪ್ರತಿಯೋಗಿಗಳಾದ ಮಾತಾಪಿತೃಗಳಿಗೂ, ತಮ್ಮತಮ್ಮ ಆಶೌಚ ಕಾಲದಿಂದಲೇ ಶುದ್ಧಿಯೇ ಹೊರತು ಇತರ ಸನ್ನಿಪಾತಾಶೌಚಗಳಿಂದ ಶುದ್ಧಿಯಿಲ್ಲವು. ಇದರ ವಿವರಣೆಯು ಮುಂದೆ ಬರೆಯಲ್ಪಡುತ್ತದೆ,

**|| ಜ್ಞಾತ್ಯಘಮಧ್ಯೇ ಪುತ್ರಸ್ಯ ಪುತ್ರ್ಯಾವಾ ಜನನೇ ಪಿತ್ರೋಃ ||**

ಸ್ವಪುತ್ರೀಪುತ್ರ ಜನನಾ ದ್ದಶಾಹತಏವ ಶುದ್ಧಿಃ | ನಜ್ಞಾತ್ಯಾದಿ ಪೂರ್ವಾಶೌಚಶೇಷೇಣ | ಅನೇನ "ಶಾವೇನ ಶುದ್ಧ್ಯತೇ ಸೂತಿ" ರಿತಿ ವಚನಾರ್ಥೋ

ಬಾಧಿತಃ "ಸ್ವಕಾಲೇನೈವ ಶುದ್ಧಿಸ್ಸ್ಯಾ ಚ್ಛೇಷನ್ಯಾಯೋ ನವಿದ್ಯತೇ" ಇತಿ ವಿಶೇಷವಿಧೇಃ ಪ್ರಾಬಲ್ಯಾತ್ |

ಟೀ || ಮಾತಾಪಿತೃಗಳು ತಮ್ಮ ಆಶೌಚ ಕಾಲದಿಂದಲೇ ಶುದ್ಧರಾಗುತ್ತಾರೆಂಬ ವಿಶೇಷವಿಧಿ ಬಲದಿಂದ ಜ್ಞಾತ್ಯಾಶೌಚ ಮಧ್ಯದಲ್ಲಿ ತನಗೆ ಪುತ್ರನಾಗಲೀ ಪುತ್ರಿಯಾಗಲೀ ಜನಿಸಿದರೆ, ಆ ಮಾತಾಪಿತೃಗಳಿಗೆ ಆ ಜನನಾದಿ ಸ್ವಾಶೌಚ ನಿವೃತ್ತಿಕಾಲದಲ್ಲಿ ಶುದ್ಧಿಯೇ ಹೊರತು ಜ್ಞಾತ್ಯಾದಿ ಶಾವಾಶೌಚದಿಂದಲೂ ನಿವೃತ್ತಿಯಿಲ್ಲವು. ಇದರಿಂದ ಶಾವಾಶೌಚದಲ್ಲಿ ಸೂತ್ಯಾಶೌಚಕ್ಕೆ ನಿವೃತ್ತಿಯೆಂಬ ಸಾಮಾನ್ಯ ಪರಿಭಾಷಾರ್ಥವು ಬಾಧಿಸಲ್ಪಟ್ಟಿತು,

## || ಜ್ಞಾತ್ಯಘಮಧ್ಯೇ ಮಾತಾಪಿತೃ ಭಾರ್ಯಾದಿ ಮರಣೇ ||

ಜ್ಞಾತ್ಯಾಶೌಚಮಧ್ಯೇ ಮಾತಾಪಿತೃ ಮರಣೇ ಭಾರ್ಯಾಮರಣೇ ಭಾರ್ಯಾಯಾಃ ಪತಿಮರಣೇಚ ತತ್ಪ್ರತಿಯೋಗಿನಾಂ ಪುತ್ರಾಣಾಂ ಪತ್ಯುಃ ಭಾರ್ಯಾಯಾಶ್ಚ ಸ್ವಸ್ವಾಶೌಚ ಕಾಲತಏವ ಶುದ್ಧಿಃ | ನಾನ್ಯಪೂರ್ವಾಶೌಚ ಶೇಷೇಣ | ಸಪತ್ನೀಮರಣೇಪಿ ಚೈವಂ | ತಾಸಾಂ ಪತಿಸಮಾನ ಧರ್ಮತ್ವಾತ್ |

ಟೀ || ಜ್ಞಾತ್ಯಾದ್ಯಾಶೌಚ ಮಧ್ಯದಲ್ಲಿ ತಂದೆತಾಯಿಗಳ ಮರಣದಲ್ಲೂ ಪತ್ನೀಮರಣದಲ್ಲೂ, ಪತಿಮರಣದಲ್ಲೂ ಕ್ರಮವಾಗಿ ತತ್ಪ್ರತಿಯೋಗಿಗಳಾದ ಮಗನಿಗೂ ಗಂಡನಿಗೂ ಹೆಂಡತಿಗೂ ಸಹ ತಮ್ಮತಮ್ಮ ಆಶೌಚಕಾಲವಾದ ಹತ್ತು ದಿನದಿಂದಲೇ ನಿವೃತ್ತಿಯೇ ಹೊರತು ಇತರ ಜ್ಞಾತ್ಯಾದ್ಯಾಶೌಚಶೇಷದಿಂದ ನಿವೃತ್ತಿಯಿಲ್ಲವು. ಸವತಿಗೂ ಹಾಗೆಯೇ. ಅವಳಿಗೆ ಪತಿಸಮಾನ ಧರ್ಮವಿರುವುದರಿಂದ ಅಂದರೆ ಜ್ಞಾತ್ಯಾಶೌಚದಲ್ಲಿ ಸವತಿ ಮೃತಳಾದರೆ ಆ ಸವತಿಯ ಆಶೌಚವನ್ನೇ ಅನುಷ್ಠಾನ ಮಾಡಬೇಕು. ಜ್ಞಾತ್ಯಾಶೌಚದಿಂದ ನಿವೃತ್ತಿಯಿಲ್ಲ.

## || ಪಿತ್ರಾಶೌಚಮಧ್ಯೇ ಪುತ್ರಜನನ ಮರಣಾಶೌಚಂ ||

ಪಿತ್ರೋರಘಮಧ್ಯೇ ಪುತ್ರಜನನೇ ಮರಣೇವಾ ಮಾತಾಪಿತೃ ಮರಣಾಶೌಚ ಶೇಷೇಣ ಪುತ್ರಜನ್ಮ ಮೃತಿ ನಿಮಿತ್ತಾಶೌಚಮಪಿ ಶುದ್ಧ್ಯತಿ | ಪ್ರಸವಿತ್ರ್ಯಾಸ್ತು ಪ್ರಸವ ಜನನಾಶೌಚಮೇವ | ತಥಾಚ ರತ್ನಾವಳ್ಯಾಂ |

ಶ್ಲೋ || ಪಿತ್ರೋರ್ಮೃತ್ಯಂತರಾಳೇತು ಸ್ವಭಾರ್ಯಾಚೇತ್ಪ್ರಸೂಯತೇ |
ಪಿತುಶ್ಶೇಷೇಣ ಶುದ್ಧಿಸ್ಸ್ಯಾತ್ಪತ್ನ್ಯಾಶ್ಶುದ್ಧಿ ಸ್ಸ್ವಕಾಲತ ಇತಿ |

ಟೀ || ಮಾತಾಪಿತೃ ಮರಣಾಶೌಚ ಮಧ್ಯದಲ್ಲಿ ಪುತ್ರ ಪುತ್ರೀ ಜನನವಾದರೆ ತಂದೆಗೆ ಮಾತಾ ಪಿತ್ರಾಶೌಚ ಶೇಷದಿಂದಲೇ ಶುದ್ಧಿಯು. ಅತ್ತೆಮಾವಂದಿರ ಮರಣಾಶೌಚ ಮಧ್ಯದಲ್ಲಿ ಪ್ರಸುವಿಸಿದ ಸೊಸೆಗೆ ಮಾತ್ರ ತನ್ನ ಪ್ರಸವಕಾಲಾದಿ ಆಶೌಚಾನುಷ್ಠಾನವೇ ಇತರ ಯಾವ ಆಶೌಚದಿಂದಲೂ ನಿವೃತ್ತಿಯಿಲ್ಲ. ಇದು ವಿಶೇಷವಿಧಿ ಬಲದಿಂದ.

## — ಸನ್ನಿಪಾತಾಶೌಚೇ ಅನ್ಯಃ ಕಶ್ಚಿದ್ವಿಶೇಷಃ —
## ಜ್ಞಾತ್ಯಘಮಧ್ಯೇ ಪುತ್ರಪುತ್ರೀ ಮರಣೇ ||

ಜ್ಞಾತ್ಯಘಮಧ್ಯೇ ಪುತ್ರಪುತ್ರೀ ಮರಣೇತು ಜ್ಞಾತ್ಯಾಶೌಚ ಶೇಷೇಣ ಪೂರ್ವಯೋಶ್ಶುದ್ಧಿಃ | ಜನಕಸ್ಯ ಜನನ್ಯಾಶ್ಚೇತಿ ವಚನೇ ಜನಕಸ್ಯ ಜನನ್ಯಾಃ ಭಾರ್ಯಾಯಾಃ ಭರ್ತುಶ್ಚ ಮರಣೇ ಪುತ್ರಸ್ಯ ದುಹಿತುಶ್ಚ ಜನನೇಚೇತಿ ಪುತ್ರದುಹಿತ್ರೋಃ ಜನನಮಾತ್ರ ಪರಿಗ್ರಹಣಾತ್ . ವೈದ್ಯನಾಥದೀಕ್ಷಿತೈ ಸ್ತಥೈವ ವ್ಯಾಖ್ಯಾತತ್ವಾಚ್ಚ ಪುತ್ರಪುತ್ರೀ ಮರಣ ನಿಮಿತ್ತಾಶೌಚಂ ಇತರಾಶೌಚ ಬಾಧಕಂ ನಭವತೀತಿ ಮಂತವ್ಯಂ | ಲೋಕೇ ತಥೈವ ಶಿಷ್ಟಾಚಾರ ದರ್ಶನಾಚ್ಚ |

ಟೀ || ಜ್ಞಾತ್ಯಾಶೌಚ ಮಧ್ಯದಲ್ಲಿ ಪುತ್ರೀಪುತ್ರ ಮರಣಾಶೌಚ ಪ್ರಾಪ್ತವಾದರೆ ಜ್ಞಾತ್ಯಾಶೌಚ ಶೇಷದಿಂದಲೇ ಪುತ್ರಪುತ್ರೀ ಮರಣಾಶೌಚವೂ ನಿವೃತ್ತಿಯಾಗುವುದು. ಏತಕ್ಕೆಂದರೆ— "ಜನಕಸ್ಯ ಜನನ್ಯಾಶ್ಚ" ಎಂಬ ವಚನಕ್ಕೆ ತಂದೆ, ತಾಯಿ, ಹೆಂಡತಿ, ಗಂಡ ಇವರುಗಳ ಮರಣದಲ್ಲೂ, ಪುತ್ರಪುತ್ರಿಯರ ಜನನದಲ್ಲೂ ತತ್ಪ್ರತಿಯೋಗಿಗಳಿಗೆ ಸ್ವಕಾಲತಶ್ಶುದ್ಧಿಯೆಂದು ವೈದ್ಯನಾಥರು ವ್ಯಾಖ್ಯಾನ ಮಾಡಿದ್ದಾರೆಯೇ ಹೊರತು ಪುತ್ರಪುತ್ರಿಯರ ಮರಣದಲ್ಲೂ ಶೇಷನ್ಯಾಯವಿಲ್ಲವೆಂದು ವ್ಯಾಖ್ಯಾನ ಮಾಡಿಲ್ಲ. ಲೋಕಾಚಾರವೂ ಇಲ್ಲವಾದುದರಿಂದ ಪುತ್ರಪುತ್ರೀ ಮರಣಾಶೌಚಕ್ಕಿಂತಲೂ ಜ್ಞಾತ್ಯಾಶೌಚವು ಪ್ರಬಲವೆಂದು ಹೇಳಿದಂತಾಯಿತು. ಪುತ್ರಾಶೌಚ ಮಧ್ಯದಲ್ಲಿ ಜ್ಞಾತ್ಯಾಶೌಚ ಬಂದರೆ ಸಮಾನಕಾಲೀನವಾದ ಪುತ್ರಾಶೌಚ ಶೇಷದಿಂದ "ಪೂರ್ವೇಣೈವೋತ್ತರಂ ಗಚ್ಛೇತ್" ಎಂಬ ನ್ಯಾಯದಿಂದ ಜ್ಞಾತ್ಯಾಶೌಚಕ್ಕೆ ಶುದ್ಧಿಯು. ಪುತ್ರೀಮೃತಿ ನಿಮಿತ್ತಕವಾದ ತ್ರಿರಾತ್ರಾಶೌಚದಲ್ಲಿ ಜ್ಞಾತ್ಯಾಶೌಚ ಪ್ರಾಪ್ತವಾದರೆ "ದೀರ್ಘಾದಲ್ಪಂ" ಎಂಬ ನ್ಯಾಯದಿಂದ ತ್ರಿರಾತ್ರಾಶೌಚದಿಂದ ಜ್ಞಾತ್ಯಾಶೌಚವು ನಿವೃತ್ತಿಯಾಗುವುದಿಲ್ಲವೆಂಬುದು ತಾತ್ಪರ್ಯವು. ಪುತ್ರೀಮರಣ ನಿಮಿತ್ತಕ ತ್ರಿರಾತ್ರಾಶೌಚದಲ್ಲಿ

ಅಸ್ಯತ್ರಿರಾತ್ರಾಶೌಚ ಬಂದರೆ "ಪೂರ್ವೇಣೈವೋತ್ತರಂ ಗಚ್ಛೇತ್" ಎಂಬಂತೆ ಪೂರ್ವಾಶೌಚದಿಂದ ಉತ್ತರಕ್ಕೆ ಶುದ್ಧಿಯು.

## ॥ ಸನ್ನಿಪಾತಾಶೌಚೇ ಅನ್ಯಃ ಕಶ್ಚಿದ್ವಿಶೇಷಃ ॥

ಸ್ಮೃತಿಮುಕ್ತಾಫಲೇ :— ಪೂರ್ವಾಶೌಚಂ ಪರಾಶೌಚಾಪೇಕ್ಷಯಾ ಸ್ವಲ್ಪಕಾಲಮಪಿ ಯದಿ ಪಂಚಮಾದಹ್ನಃ ಪಂಚಮದಿನಾತ್ಪರತೋಪಿ ಕತಿಪಯ ದಿನೋಪೇತಂ ಸ್ಯಾತ್, ತದಾ ಪೂರ್ವಾಶೌಚಕಾಲ ಶೇಷೇಣ ಪರಾಶೌಚಸ್ಯಾಪಿ ಶುದ್ಧಿರ್ವಿಶಿಷ್ಯತೇ । ವಿಧೀಯ್ಯತ ಇತಿ ಚಂದ್ರಿಕಾಯಾಮಸ್ಯಾಸ್ಯಾರ್ಥೋ ದರ್ಶಿತಃ । ಉತ್ತರಾಶೌಚಸ್ಯ ದೀರ್ಘಕಾಲತ್ವೇಪಿ, ಯದಿ ಪೂರ್ವಾಶೌಚಂ ಉತ್ತರಾಶೌಚ ಕಾಲಾತ್ ಅರ್ಧಾಧಿಕ ಕಾಲಂಸ್ಯಾ ತ್ತದಾ ಪೂರ್ವೇಣೈವೋತ್ತರಸ್ಯಾಪಿ ಶುದ್ಧಿರ್ಭವತಿ । ಅತ್ರೋದಾಹರಣಂ ದೀಪಿಕಾಯಾಂ :—

ಶ್ಲೋ॥ ಮಾತುರ್ಮಾಸತ್ರಯೇ ಸ್ರಾವೇ ತ್ರಿರಾತ್ರ ಮಶುಚಿರ್ಭವೇತ್ ।
ಚತುರ್ಥಾದಿಷುಮಾಸೇಷು ಮಾಸತುಲ್ಯಮಘಂ ಭವೇತ್ ॥
ಸಪ್ತಮಾದಿ ತ್ರಿಮಾಸೇಷು ಸೂತಿಕಾ ತುಲ್ಯತಾ ಭವೇತ್ ॥

ಇತ್ಯುಕ್ತ್ವಾ ಷಷ್ಠೇಮಾಸೇ ಗರ್ಭಪಾತೇ ಮಾತುರ್ಮಾಸಸಂಖ್ಯಾಕ ದಿನಾಶೌಚಪ್ರಾಪ್ತೌ ಷಡಹಾಶೌಚಮುಕ್ತಂ । ಷಡ್ರಾತ್ರಾಶೌಚಮಧ್ಯೇ ದಶರಾತ್ರಾಶೌಚಂ ಪ್ರಾಪ್ತಂಚೇ ತ್ತದರ್ಧಾಧಿಕ ಕಾಲತ್ವಾತ್ಪೂರ್ವಾಶೌಚ ಶೇಷೇಣೋತ್ತರಾಶೌಚಸ್ಯ ಶುದ್ಧಿರ್ಭವತಿ । ಏವಮನ್ಯತ್ರಾಪಿ ಉತ್ತರಾಶೌಚ ಕಾಲಾರ್ಧಾಧಿಕ ಕಾಲೇ ಪೂರ್ವಾಶೌಚೇ ದ್ವಿತೀಯಾಶೌಚಸ್ಯ ಪೂರ್ವಶೇಷೇಣೈವ ಶುದ್ಧಿರಿತಿ । ಅಯಮೇವಾರ್ಥಃ ಸ್ಮೃತಿರತ್ನ ಮಾಧವೀಯಾದಾವಭಿಹಿತಃ । ಷಡಹಾಶೌಚಸ್ಯ ಕ್ರಮಾಶೌಚತ್ವಾತ್ಕಲೌ ನಿಷಿದ್ಧಮಿತಿ ಕೈಶ್ಚಿದುಚ್ಯತೇ । ಕ್ರಮಾಶೌಚ ವ್ಯತಿರಿಕ್ತಸ್ಯ ಪಂಚದಿನಾಧಿಕಾಶೌಚಸ್ಯ ಚಂದ್ರಿಕಾದಾ ವುಕ್ತತ್ವಾ ನ್ನೇದಂ ಕ್ರಮಾಶೌಚಮಿತ್ಯನ್ಯೈರುಚ್ಯತೇ । ಪಕ್ಷದ್ವಯಸ್ಯ ಸತ್ವಾದತ್ರಾಪಿ ಯಥಾಕುಲಕ್ರಮಾಗತಾಚಾರಂವ್ಯವಸ್ಥಾ ಜ್ಞಾತವ್ಯಾ । ಮಯಾತ್ರ ಸಂಕ್ಷೇಪತೋ ನಿದರ್ಶಿತಃ । ವಿಶೇಷೋ ನಿಬಂಧನಾದೌ ದ್ರಷ್ಟವ್ಯಃ । ದುರವಗಾಹ್ಯತ್ವ ಭಿಯಾಚಾತ್ರ ವಿರಮ್ಯತೇ ।

ಟೀ ॥ ಪೂರ್ವಾಶೌಚವು ಉತ್ತರಾಶೌಚಕ್ಕಿಂತಲೂ ಅಲ್ಪಕಾಲವಾದಾಗ್ಯೂ ಐದುದಿನಕ್ಕೆ ಮೇಲೆ ಕೆಲವುದಿನ ಇರುವ ಆಶೌಚವಾದರೆ ಪೂರ್ವಾಶೌಚ ಕಾಲ ಶೇಷದಿಂದ ಉತ್ತರಾಶೌಚಕ್ಕೂ ಶುದ್ಧಿಯೆಂಬುದಾಗಿ ಚಂದ್ರಿಕಾದಿ ಗ್ರಂಥದಲ್ಲಿ

ಹೇಳಲ್ಪಟ್ಟಿರುವುದಾಗಿ ವೈದ್ಯನಾಥರು ಉದಹರಿಸಿದ್ದಾರೆ. ಇದಕ್ಕೆ ಉದಾಹರಣವು—ಷಷ್ಠಮಾಸ ಗರ್ಭಪಾತದಲ್ಲಿ ತಾಯಿಗೆ ಆರುದಿನಾಶೌಚವು. ಅದರ ಮಧ್ಯೆ ದಶಾಹಾಶೌಚವು ಪ್ರಾಪ್ತವಾದರೆ ಮೊದಲಸೆಯದಾದ ಆರು ದಿನಾಶೌಚವು ಉತ್ತರ ದಶಾಹಾಶೌಚಕ್ಕಿಂತಲೂ ಅರ್ಧಾಧಿಕ ಕಾಲವಾದ್ದರಿಂದ ಪೂರ್ವ ಷಡಹಾಶೌಚ ಶೇಷದಲ್ಲಿ ಉತ್ತರ ದಶಾಹಾಶೌಚಕ್ಕೂ ಶುದ್ಧಿಯು | ಇಲ್ಲಿ ಕೆಲವರು ಷಡಹಾಶೌಚವು ಕ್ರಮಾಶೌಚವಾದ್ದರಿಂದ ಕಲಿಯುಗದಲ್ಲಿ ನಿಷಿದ್ಧವೆಂದು ಹೇಳುತ್ತಾರೆ. ಮತ್ತೆ ಕೆಲವರು ಕ್ರಮಾಶೌಚ ವ್ಯತಿರಿಕ್ತವಾದ ಪಂಚದಿನಾಧಿಕಾಶೌಚವು ಚಂದ್ರಿಕಾದಿ ಗ್ರಂಥದಲ್ಲಿ ಹೇಳಿರುವುದರಿಂದ ಇದು ಕ್ರಮಾಶೌಚವಲ್ಲವೆಂದು ಹೇಳುತ್ತಾರೆ. ಎರಡುಪಕ್ಷವೂ ಇರುವುದರಿಂದ ತಮ್ಮ ಕುಲಕ್ರಮಾಗತಾಚಾರದಂತೆ ನಡೆದುಕೊಳ್ಳಬೇಕು. ಸಮ್ಮಿಂದ ಸಂಕ್ಷೇಪವಾಗಿ ತೋರಿಸಲ್ಪಟ್ಟಿದೆ. ವಿಶೇಷವು ನಿಬಂಧನಾದಿ ಗ್ರಂಥದಲ್ಲಿ ನೋಡಲ್ಪಡತಕ್ಕದ್ದು. ಗ್ರಂಥವಿಸ್ತರ ಭಯದಿಂದ ವಿರಾಮಮಾಡಿದೆ.

## ॥ ದಾಹಕಸ್ಯಾಶೌಚಂ ॥

ಕೇವಲಾಶೌಚಮಧ್ಯೇ ದಹನಕರ್ತೃತ್ವ ಸಂಭವೇ ದಹನದಿನಾದಾರಭ್ಯ ದಾಹಕಸ್ಯ ದಶಾಹಮಾಶೌಚಂ | ಸಪೂರ್ವಶೇಷೇಣ ಶುದ್ಧಿಃ | ಕಿಂಚ :— ದಾಹಕಸ್ಯ ಪುತ್ರಜನನೇಪಿ ದಹನ ನಿಮಿತ್ತಾಶೌಚ ಶೇಷೇಣ ಪುತ್ರಜನನ ನಿಮಿತ್ತಾಶೌಚಸ್ಯಾಪಿ ಶುದ್ಧಿಃ | ತಥಾಚ ಪ್ರಜಾಪತಿಃ :—

ಶ್ಲೋ ॥ ಆಶೌಚೇತು ಸಮುತ್ಪನ್ನೇ ಪುತ್ರಜನ್ಮ ಯದಾಭವೇತ್ |
ಕರ್ತುಸ್ತಾತ್ಕಾಲಿಕೀ ಶುದ್ಧಿಃ ಪೂರ್ವಾಶೌಚೇನ ಶುದ್ಧ್ಯತಿ ॥

ಅಸ್ಯವ್ಯಾಖ್ಯಾ | ಆಶೌಚೇ—ಶಾವಾಶೌಚೇ ಕರ್ತುಃ—ಪ್ರೇತಕರ್ಮಕರ್ತುಃ, ಜಾತಕರ್ಮಣಿ ತಾತ್ಕಾಲಿಕೀಶುದ್ಧಿಃ | ಪೂರ್ವಾಶೌಚೇನ ಉತ್ತರಾಶೌಚಸ್ಯ ಚ ಶುದ್ಧಿಃ | ನತು ಪುತ್ರಜನನಾಶೌಚ ಕಾಲೇನ | ಜನಕಸ್ಯ ಜನನ್ಯಾಶ್ಚ ಶೇಷನ್ಯಾಯೋನವಿದ್ಯತೇ ॥ ಇತಿವಚನಾರ್ಥಂ ಬಾಧಯಿತ್ವಾ ॥

ಶ್ಲೋ॥ ಜನನಾದ್ದ್ವಿಗುಣಂ ಶಾವಂ ಶಾವಾದ್ದ್ವಿಗುಣಮಾರ್ತವಂ |
ಆರ್ತವಾದ್ದ್ವಿಗುಣಾಸೂತಿ ಸ್ತತೋಪಿ ಶವದಾಹಕಃ ||

ಇತಿ ವಚನಸದ್ಭಾವಾತ್ | ಕಿಂಚ ಆಶೌಚೇತು ಸಮುತ್ಪನ್ನ ಇತಿ ಪ್ರಾಗುದಾಹೃತ ವಚನೇ ಪುತ್ರಪದ ಗ್ರಹಣಾ ದ್ವಿಸ್ಪಷ್ಟಮೇವ ಜನಕವಿಷಯತ್ವಂ |

ಆಶ್ವಲಾಯನಾದಿಭಿಸ್ತು ಸಂಸ್ಕರ್ತುರಪಿ ಪುತ್ರಜನನಾಶೌಚಮೇವ ಸ್ವಕಾಲಃ। ತತ್ಸಮಾಪ್ತಿಪರ್ಯಂತ ಮನುಷ್ಠೇಯಮಿತ್ಯುಕ್ತಂ। ಯಥಾಕುಲಾಚಾರ ಸ್ತಥಾ ಚರಣೀಯಮಿತಿ ಷಡಶೀತಿಕಾರಾಭಿಪ್ರಾಯಃ।

ಟೀ|| ಇತರಾಶೌಚಮಧ್ಯದಲ್ಲಿ ಕ್ರಿಯಾಕರ್ತೃತ್ವ ಸಂಭವಿಸಿದರೆ ಕ್ರಿಯಾನಿಮಿತ್ತಾಶೌಚ ಕಾಲದಿಂದಲೇ ಶುದ್ಧಿಯು। ಪೂರ್ವಾಶೌಚದಿಂದ ಶುದ್ಧಿಯಿಲ್ಲವು. ಈ ಕರ್ತೃವಿಗೆ ಆಶೌಚಮಧ್ಯದಲ್ಲಿ ಪುತ್ರಜನನವಾದರೆ ಪುತ್ರನಿಗೆ ಜಾತಕರ್ಮ ಮಾಡುವುದಕ್ಕೆ ಮಾತ್ರ ತಾತ್ಕಾಲಿಕಶುದ್ಧಿಯು। ದಾಹ ಕರ್ತೃತ್ವ ನಿಮಿತ್ತಾಶೌಚ ಶೇಷದಿಂದ ಪುತ್ರಜನನಾಶೌಚಕ್ಕೂ ಶುದ್ಧಿಯು। ತಂದೆಗೆ ಪುತ್ರಜನನಾಶೌಚವೇ ಮುಖ್ಯವೆಂಬ ವಚನಾರ್ಥವನ್ನು ಬಾಧಿಸಿ "ತತೋಽಪಿ ಶವದಾಹಕಃ" ಎಂಬ ವಚನವು ಪ್ರವರ್ತಿಸಿದೆಯೆಂದು ಕೆಲವು ನಿಬಂಧನಕಾರರು ಹೇಳಿದ್ದಾರೆ. ಆಶ್ವಲಾಯನಾದಿಗಳು ಮಾತಾಪಿತೃಭಿನ್ನರಿಗೆ ಸಂಸ್ಕಾರಮಾಡಿದವನಿಗೂ ತನ್ನ ಪುತ್ರಜನನಕಾಲವೇ ಮುಖ್ಯವೆಂದು ಹೇಳಿದ್ದಾರೆ. ದೇಶಕುಲ ಕ್ರಮಾಗತವಾದ ಆಚಾರವು ಹೇಗೋ ಅದರಂತೆಯೇ ನಡೆಯಬೇಕೆಂದು ಷಡಶೀತಿಕಾರರು ಹೇಳುತ್ತಾರೆ. ಮೈಸೂರುದೇಶದಲ್ಲಿ ಪ್ರಾಯಶಃ ಕರ್ತೃತ್ವನಿಮಿತ್ತಾಶೌಚಕ್ಕೆ ಪ್ರಾಧಾನ್ಯದಿಂದ ಅದರಲ್ಲಿ ಪುತ್ರಜನನಾಶೌಚ ನಿವೃತ್ತಿಯನ್ನು ಅನುಷ್ಠಾನದಲ್ಲಿ ತಂದಿದ್ದಾರೆ. ಯಾರ ವಂಶಪರಂಪರೆಯಲ್ಲಿ ಇದು ಭೇದವಾಗಿದೆಯೋ ಅವರು ಅದೇ ರೀತಿ ನಡೆಯಬೇಕು.

## || ಭ್ರಾತುರ್ದಾಹಕರ್ತೃತ್ವಸಂಭವೇ ವಿಶೇಷಃ ||

ಸ್ಮೃತಿಮುಕ್ತಾಫಲೇ : ಭ್ರಾತುರ್ದಾಹಕಸ್ಯ ವಿಶೇಷೋಽಭಿಹಿತಃ ||

ಶ್ಲೋ|| ಭ್ರಾತುರ್ದೇಶಾಂತರಮೃತೌ ಷಣ್ಮಾಸಾದ್ವತ್ಸರಾದಧಃ ।
ದಶರಾತ್ರಂ ತ್ರಿರಾತ್ರಂಸ್ಯಾ ದ್ದಶಾಹಂ ದಾಹಕಸ್ಯತು || ಇತಿ
ದಾಹಕಸ್ಯ ಭ್ರಾತುಃ । ತಥಾ

ಶ್ಲೋ|| ದೇಶಾಂತರ ಮೃತಿರ್ಯತ್ರ ತ್ವನುಜಾ ಗ್ರಜಯೋರ್ಯದಿ ।
ಷಣ್ಮಾಸಾದ್ವತ್ಸರಾದರ್ವಾ ಗ್ದಶಾಹಂ ತ್ರ್ಯಹಮಾಚರೇದಿತಿ ||

ಷಣ್ಮಾಸಾತ್ಪೂರ್ವಂ ದಶಾಹಂ ಕ್ರಿಯಾಚ । ತತ್ಪರಂ ವತ್ಸರಾತ್ಪೂರ್ವಂ ತ್ರ್ಯಹಂ ಕ್ರಿಯಾಚ । ಕೃತಕ್ರಿಯ ವಿಷಯೇತು ಪೈಠೀನಸಿಃ:—

ಶ್ಲೋ|| ಪ್ರೋಷಿತ ಭ್ರಾತೃಮರಣೇ ದತ್ತಪಿಂಡೋದಕಕ್ರಿಯೇ |
ತ್ರಿರಾತ್ರಂ ಸೂತಕಂ ತತ್ರ ದಶಾಹಂ ಪುತ್ರಭಾರ್ಯಯೋರಿತಿ ||

ಏತಚ್ಚ ತ್ರಿರಾತ್ರವಿಧಾನಂ ಷಣ್ಮಾಸಾತ್ಪೂರ್ವಂ ವೇದಿತವ್ಯಂ | ಗಾಲವಃ|

ಶ್ಲೋ|| ಕೃತೋದಕೇತು ಷಣ್ಮಾಸಾ ತ್ಪಕ್ಷಿಣೀ ತ್ವಘಮಿಷ್ಯತೇ |
ಅಧರ್ಶ್ಚೇ ತ್ರಿದಿನಂ ಗ್ರಾಹ್ಯ ಮಕೃತೇತು ದಶಾಹ್ನಿಕಂ ||

ಇತ್ಯುಕ್ತ್ಯಾ ಕೃತಕ್ರಿಯಸ್ಯಾಪಿ ಭ್ರಾತುರ್ಮರಣಶ್ರವಣೇ ಷಣ್ಮಾಸಪರ್ಯಂತಂ ತ್ರಿರಾತ್ರಾಶೌಚಂ | ತದೂರ್ಧ್ವಂ ವತ್ಸರಪರ್ಯಂತಂ ಪಕ್ಷಿಣೀ | ವತ್ಸರಾತ್ಪರಂ ದಿನಂ | ಇಮೌ ಕ್ರಿಯಾಶೌಚಭೇದೌ ಜ್ಯೇಷ್ಠಕನಿಷ್ಠಭ್ರಾತ್ರೋ ಸ್ಸಮಾನೌ |

ಟೀ|| ವೈದ್ಯನಾಥಸ್ಮೃತಿಯಲ್ಲಿ "ಅಣ್ಣತಮ್ಮಂದರಿಗೆ ದೇಶಾಂತರದಲ್ಲಿ ಮರಣಶ್ರವಣವಾದರೆ ಕರ್ತೃತ್ವವನ್ನು ವಹಿಸಿದರೆ ಆರುತಿಂಗಳವರೆಗೂ ಹತ್ತುದಿನಾಶೌಚವೂ ಕ್ರಿಯೆಯೂ ಷಣ್ಮಾಸಾತ್ಪರ ವತ್ಸರಪರ್ಯಂತವಾಗಿ ತ್ರ್ಯಹವೂ ಕ್ರಿಯೆಯೂ ಸಹ | ಕೃತಕ್ರಿಯನಾಗಿದ್ದರೆ ಆರು ತಿಂಗಳವರೆಗೂ ತ್ರಿರಾತ್ರವು. ಅದಕ್ಕೆ ಮೇಲೆ ವತ್ಸರಪರ್ಯಂತವೂ ಪಕ್ಷಿಣಿಯು. ವತ್ಸರಾತ್ಪರ ಒಂದುದಿನವು. ಈ ವಿಶೇಷವಿಧಿಯು ಜ್ಯೇಷ್ಠಕನಿಷ್ಠ ಭ್ರಾತೃಗಳಿಗೂ ಸಮಾನವಾದದ್ದು.

## || ಅನೇಕದಾಹ ವಿಷಯೇ ||

ಅನೇಕದಾಹವಿಷಯೇತು ತದಾಶೌಚಮಧ್ಯೇ ಪುನರಪ್ಯೇಕಂ ದ್ವೌವಾ ಬಹೂನ್ವಾ ದಹತಿಚೇತ್ ಸೋಗ್ನಿದೋಪಿ ಪ್ರಥಮ ದಾಹಾಶೌಚ ಶೇಷೇಣೈವ ಶುದ್ಧೋಭವತಿ | ಅನ್ಯದಾಹ ಮಧ್ಯೇ ಪಿತರೌ ದಹೇಚ್ಚೇತ್ ಪಿತೃಮಾತೃದಹನ ದಿನಮಾರಭ್ಯ ದಶಾಹಂ | ನಪೂರ್ವಶೇಷೇಣ ಶುದ್ಧಿಃ.

ಟೀ|| ಒಂದು ದಹನ ಕರ್ತೃತ್ವಾಶೌಚಮಧ್ಯದಲ್ಲಿ ಮತ್ತೆ ಒಂದು ಎರಡು ಮೂರು ಕರ್ತೃತ್ವ ಸಂಭವಿಸಿದ್ದಾಗ್ಯೂ ಆದಾಹಕನಿಗೆ ಪೂರ್ವದಾಹಾಶೌಚ ಶೇಷದಿಂದ ಉತ್ತರಾಶೌಚಗಳಿಗೂ ಶುದ್ಧಿಯು. ಇತರ ದಾಹಾಶೌಚ ಮಧ್ಯದಲ್ಲಿ ಮಾತಾಪಿತೃಗಳ ದಹನಮಾಡಿದರೆ ಮಾತಾಪಿತೃಗಳ ದಹನಾರಭ್ಯ ದಾಹಕನು ದಶಾಹಾಶೌಚಾನುಷ್ಠಾನ ಮಾಡಬೇಕು.

## ಇತಿ ಸನ್ನಿಪಾತ್ರಾಶೌಚಂ ||



## ॥ ಅನಾಹಿತಾಗ್ನಿ ಮರಣೇ ॥

ಅನಾಹಿತಾಗ್ನಿ ಮರಣೇ ಮರಣಾದಿ ದಶಾಹಮಾಶೌಚಂ । ದಶಾಹಮಧ್ಯೇ ಪುನರ್ದಾಹೇ ಪುತ್ರಾದೀನಾಂ ಸರ್ವೇಷಾಂ ಸಪಿಂಡಾನಾಂಚ ಶಿಷ್ಟಾಹಮೇವಾಶೌಚಂ । ಅನಾಹಿತಾಗ್ನೇಸ್ತು ದುರ್ಮೃತ್ಯಾದೌ ಮಂತ್ರವ ದ್ದಾಹಾತ್ಪೂರ್ವ ಮಾಶೌಚಗ್ರಹಣಂ ವಿಕಲ್ಪಿತಂ । ಮರಣಾದ್ಯಾಶೌಚಾನುಷ್ಠಾನ ಮೇವೇದಾನೀ ಮಾಚಾರೇ ವರ್ತತೇ ।

ಟೀ ॥ ಅನಾಹಿತಾಗ್ನಿಯೆಂದರೆ ಶ್ರೌತಾಗ್ನಿಸಂಧಾನವಿಲ್ಲದವನು. ಅವನ ಮರಣದಲ್ಲಿ ಮರಣದಿನಾದಿ ದಶಾಹಾದ್ಯಾಶೌಚವು. ದಶಾಹಮಧ್ಯೇ ಪುನರ್ದಹನಾದಿ ಸಂಸ್ಕಾರನಡೆದಾಗ್ಯೂ ಪುತ್ರಾದಿ ಸರ್ವಸಪಿಂಡರಿಗೂ ಹತ್ತುದಿನದೊಳಗೆ ಮಿಕ್ಕದಿನವೆಷ್ಟೋ ಅಷ್ಟೇದಿನ ಆಶೌಚವು. ಅನಾಹಿತಾಗ್ನಿಗೆ ದುರ್ಮರಣಾದಿಗಳಿಂದ ಮಂತ್ರಪೂರ್ವಕ ದಾಹವಿಲ್ಲದಪಕ್ಷೆ ತತ್ಕಾಲದಲ್ಲಿ ಆಶೌಚಗ್ರಹಣವು ವಿಕಲ್ಪವು ಎಂದರೆ ಸಂಸ್ಕಾರಾರಂಭದಲ್ಲಿಯಾದರೂ ಮರಣಾದಿಯಾಗಿಯಾದರೂ ಸಪಿಂಡರು ಆಶೌಚಾನುಷ್ಠಾನವನ್ನು ಮಾಡಬಹುದು. ಮರಣಾದ್ಯಾಶೌಚಾನುಷ್ಠಾನವೇ ಈಗ ಆಚಾರದಲ್ಲಿದೆ.

## ॥ ಆಹಿತಾಗ್ನಿ ಮರಣೇ ॥

ಆಹಿತಾಗ್ನಿಮರಣೇ ದಹನದಿನಾದ್ದಶಾಹಂ । ತ್ರಿಪಕ್ಷಾದರ್ವಾಗ್ಯಚ್ಛ್ರಾದ್ಧಂ ತದ್ದಹನತಿಥೌ ಕರ್ತವ್ಯಂ । ತದೂರ್ಧ್ವಂ ಯತ್ಕರಣೀಯಂ ಶ್ರಾದ್ಧಂ, ತನ್ಮೃತತಿಥಾವೇವ । ಆಪಸ್ತಂಬ ಸೂತ್ರಾಂಗಿಯ ವಸಿಷ್ಠಃ :—

ಶ್ಲೋ ॥ ಊರ್ಧ್ವಂ ತ್ರಿಪಕ್ಷಾದ್ಯಚ್ಛ್ರಾದ್ಧಂ ಮೃತಾಹೇನೈವ ತದ್ಭವೇತ್ ।
ಅಧಸ್ತು ಕಾರಯೇದ್ದಾಹಾ ದಾಹಿತಾಗ್ನೇ ರ್ದ್ವಿಜನ್ಮನಃ ಇತಿ ॥

ಅನೇನ ದ್ವಿತೀಯ್ಯಮಾಸಿಕಂ ದಹನತಿಥೌ ಕರ್ತವ್ಯಮಿತ್ಯುಕ್ತಂ ಭವತಿ । ಸ್ಮೃತಿಮುಕ್ತಾಫಲೇ ಶ್ರಾದ್ಧಕಾಂಡೇ ೨೦೯ ಪುಟೇ ಸ್ಪಷ್ಟಂ ದ್ರಷ್ಟವ್ಯಂ । ಯಜ್ವನಃ ದಹನಾದ್ಯಾಶೌಚವಿಧಾನಂ ದಶಾಹಾದೂರ್ಧ್ವಂ ದಹನವಿಷಯಂ । ಯಜ್ವಾ ಯಜ್ವನೋಃ ಮಂತ್ರಪೂರ್ವಕ ದಾಹಸ್ಯ ತತಾಸೀಮಭಾವೇ, ದಶಾಹ ಮಧ್ಯೇ ಪುನರ್ದಾಹೇ ಕೃತೇಪಿ ಪುತ್ರಾದಿ ಸಪಿಂಡಾನಾಂ ಶಿಷ್ಟಾಹಮೇವಾಘಂ । ನಪುನರ್ದಾಹಾದಿ ದಶಾಹಂ । ಯದಿ ದಶಾಹಾತ್ಪರಂ ಯಜ್ವನಃ ಪುನರ್ದಾಹಸ್ಯಾತ್ತದಾ ಪುತ್ರಾದೀನಾಂ ಸಪಿಂಡಾನಾಂಚ ದಹನಾದಿ ದಶಾಹಂ । ಯಜ್ವ

ನೋ ಮರಣೇ ವಿಧಿವದ್ದಾಹಾತ್ಪೂರ್ವಂ ಪುತ್ರಾದೀನಾ ಮಾಶೌಚಾಭಾವಃ |
ಚಂದ್ರಿಕಾಯಾಂ —

ಶ್ಲೋ || ಆಹಿತಾಗ್ನೇಸ್ತು ವಿಧಿವ ದ್ದಾಹಾಂತಂ ನಾಸ್ತಿಚೇತ್ತದಾ |
ಆಶೌಚಗ್ರಹಣಂ ನಾಸ್ತಿ ದಾಹಾದ್ಯಾಶೌಚಮಿಷ್ಯತೆ ||

ಪಾರಸ್ಕರಃ—

ಶ್ಲೋ || ಆಹಿತಾಗ್ನೇಸ್ತು ದಹನಾ ದ್ದಶಾಹಾಶೌಚಮಿಷ್ಯತೇ |

ಇತ್ಯಾದಿಭಿರ್ದಹನಪರ್ಯಂತ ಮಾಶೌಚಾಭಾವೇನ—

ಶ್ಲೋ || ವಿದೇಶಸ್ಥೋ ಗೃಹೀಯಾವ ದ್ವಿಧಿನಾ ನೈವಸಂಸ್ಕೃತಃ |
ಪುತ್ರಾದೀನಾಂತು ಸಂಧ್ಯಾದಿ ಕರ್ಮಲೋಪೋ ನವಿದ್ಯತೇ ||

ಇತ್ಯಾದಿಭಿರ್ಯಜ್ವನೋ ವಿಧಿವದ್ದಾಹಪರ್ಯಂತಂ ಪುತ್ರಾದೀನಾಂ ಸಂಧ್ಯಾದಿ ಕರ್ಮಲೋಪೋ ನಾಸ್ತಿ | ವಿಜ್ಞಾನೇಶ್ವರೇಣ ಸಾಗ್ನೇಸ್ಸಂಸ್ಕಾರ ಕರ್ಮಣ ಇತಿ ಶ್ರವಣಾತ್ | ಆಹಿತಾಗ್ನೌ ಪಿತರಿ ದೇಶಾಂತರೇ ಮೃತೇ ತತ್ಪುತ್ರಾಣಾಂ ಪಿತೃಸಂಸ್ಕಾರಾರಂಭ ಪರ್ಯಂತಂ ಸಂಧ್ಯಾದಿ ಕರ್ಮಲೋಪೋ ನಾಸ್ತೀತ್ಯನು ಸಂಧೇಯಂ | ಅತ್ರ ಕಶ್ಚಿದ್ವಿಶೇಷಃ | ಆಹಿತಾಗ್ನೇಸ್ತತ್ಪತ್ನ್ಯಾಶ್ಚ ವೈತಾನಿ ಕಾಗ್ನಿ ಸಂಸ್ಕಾರೇಸತಿ ದಾಹಾದ್ಯಾಶೌಚಂ | ವೈತಾನಿಕಾಗ್ನಿ ಸಂಸ್ಕಾರಾ ಭಾವೇ ಮರಣಾದ್ಯಾಶೌಚಮೇವೇತ್ಯೇಕಃ ಪಕ್ಷಃ | ವೈತಾನಿಕಾಗ್ನಿ ಸಂಸ್ಕಾ ರಾಭಾವೇಪಿ ಆಹಿತಾಗ್ನೇಸ್ತತ್ಪತ್ನ್ಯಾಶ್ಚ ಮರಣೇ ದಹನಾದ್ಯೇವಾಶೌಚಮಿ ತ್ಯನ್ಯಃ ಪಕ್ಷಃ | ಶಿಷ್ಟಾಚಾರಾದಿಹ ವ್ಯವಸ್ಥೇತಿ ವೈದ್ಯನಾಥೋಕ್ತಿಃ—ಆಹಿ ತಾಗ್ನಿದಂಪತ್ಯೋರಪಿ ಮರಣೇ ಮರಣಾದ್ಯಾಶೌಚಾನುಷ್ಠಾನ ಮೇವಾತ್ರಾ ಚಾರೇ ವರ್ತತೇ |

ಟೀ || ಶ್ರೌತಾಗ್ನಿಯುಳ್ಳವನ ಮರಣದಲ್ಲಿ ದಹನದಿನಾದ್ಯಾಶೌಚಾನು ಷ್ಠಾನವು. ತ್ರಿಪಕ್ಷಾತ್ಪೂರ್ವದಲ್ಲಿ ನಡೆಯುತಕ್ಕ ಶ್ರಾದ್ಧವನ್ನು ದಹನತಿಥಿಯಲ್ಲಿ ನಡೆಸಬೇಕು. ತ್ರಿಪಕ್ಷಾದೂರ್ಧ್ವದಲ್ಲಿ ನಡೆಯುತಕ್ಕ ಶ್ರಾದ್ಧಾದಿಗಳನ್ನು ಮೃತತಿಥಿ ಯಲ್ಲೇ ಮಾಡಬೇಕು. ದ್ವಿತೀಯ ಮಾಸಿಕವನ್ನು ದಹನತಿಥಿಯಲ್ಲಿ ಮಾಡಬೇ ಕೆಂದು ಹೇಳಿದಂತಾಯಿತು. ಆಹಿತಾಗ್ನಿಗೆ ದಹನಾದ ದಶಾಹಾಶೌಚ ವಿಧಾ ನವು ಮೃತಿದಶಾಹಾದೂರ್ಧ್ವದಲ್ಲಿ ದಹನಮಾಡತಕ್ಕ ವಿಷಯವು. ಆಹಿತಾಗ್ನ್ಯ ನಾಹಿತಾಗ್ನಿಗಳಿಗೆ ಮರಣದಲ್ಲಿ ಮಂತ್ರಪೂರ್ವಕ ದಾಹವಾಗದೇ ಇದ್ದಲ್ಲಿ ದಶಾಹ

ಮಧ್ಯೇ ಪುನರ್ದಹನ ನಡೆದರೆ ಮರಣಾದಿ ಶಿಷ್ಟಾಹವೇ ಆಶೌಚವು. ಈ ವಿಷಯವು ಸ್ಮೃತಿಮುಕ್ತಾಫಲ ಶ್ರಾದ್ಧಕಾಂಡದಲ್ಲಿ ೨೧೯ನೇ ಪುಟದಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಇನ್ನೊಂದು ವಿಶೇಷವು :—ಆಹಿತಾಗ್ನಿ ಮರಣದಲ್ಲಿ ಸಂಸ್ಕಾರ ದಿನಾರಭ್ಯ ಆಶೌಚವನ್ನು ವಿಧಿಸಿರುವುದರಿಂದ ಅದುವರೆಗೂ ಪುತ್ರಾದಿಗಳಿಗೂ ಜ್ಞಾತಿಗಳಿಗೂ ಸಂಧ್ಯಾದಿ ನಿತ ಕರ್ಮ ಲೋಪವಿಲ್ಲವು. ದೇಶಾಂತರದಲ್ಲಿ ಶ್ರವಣ ಮಾಡಿದರೂ ಸಂಸ್ಕಾರದಿನಾದ್ಯಾಶೌಚವೇ ಹೊರತು ಶ್ರವಣಾದ್ಯಾಶೌಚವು ಪುತ್ರಾದಿಗಳಿಗೂ ಇಲ್ಲ. ಇನ್ನೂ ಒಂದು ವಿಶೇಷವು :—ಶ್ರೌತಾಗ್ನಿಯಿಂದ ಸಂಸ್ಕಾರವು ನಡೆದಪಕ್ಷೆ ದಹನಾದ್ಯಾಶೌಚವು. ಇಲ್ಲದಿದ್ದರೆ ಮರಣಾದ್ಯಾಶೌಚ ವೆಂದು ಒಂದುಪಕ್ಷವು. ಆಹಿತಾಗ್ನಿಗೂ, ಆಹಿತಾಗ್ನಿಯ ಪತ್ನಿಗೂ ಇವರಲ್ಲಿ ಯಾರಿಗಾದರೂ ಶ್ರೌತಾಗ್ನಿ ಸಂಸ್ಕಾರವಿಲ್ಲದೇ ಇದ್ದಾಗ್ಯೂ ದಹನಾದ್ಯಾಶೌ ಚವೇ ಎಂದು ಒಂದು ಪಕ್ಷವು, ಶಿಷ್ಟಾಚಾರದಂತೆ ವ ವಸ್ಥೆಯೆಂದು ವೈದ್ಯ ನಾಥರು ಹೇಳಿದ್ದಾರೆ. ಆಹಿತಾಗ್ನಿ ದಂಪತಿಗಳಿಬ್ಬರಿಗೂ ದಹನಾದ್ಯಾಶೌಚಾ ನುಷ್ಠಾನವೇ ಈ ಕರ್ಣಾಟದೇಶದಲ್ಲಿ ಆಚಾರದಲ್ಲಿದೆ.

## ಆಹಿತಾಗ್ನೇರ್ದಹನಾದ್ಯಾಶೌಚೇ ತತ್ಪ್ರಾಕ್ಕರ್ತವ್ಯಾಕರ್ತವ್ಯ ನಿರೂಪಣಂ.

ಅಹಿತಾಗ್ನೇರ್ದಹನದಿನಾದ್ಯಾಶೌಚವಿಧಾನಂ ತದಾದಿ ದಶಾಹಪ್ರಾಪ್ತ್ಯರ್ಥಂ || ನತು ಪುತ್ರಾದೀನಾಂ ತತ್ಪೂರ್ವಮಾಶೌಚಾಭಾವ ಪ್ರತಿಪಾದನಾರ್ಥಂ | ದಹನಪರ್ಯಂತಂ ಅಸ್ಪೃಶ್ಯತ್ವಾದ್ಯಭಾವೇಪಿ ವಿಧ್ಯುಕ್ತ ಸಂಧ್ಯಾವಂದನೋಪಾಸನಾದಿ ಕರ್ಮಾರ್ಹತ್ವಮಾತ್ರಂ | ನತು ನಿತ್ಯನೈಮಿತ್ತಿಕಾದಿಕರ್ಮಾರ್ಹತ್ವಂ | ಅಯಂ ವಿಷಯಃ ಸಾಪಿಂಡ್ಯಾಕರಣೇ ಮುಖ್ಯಕರ್ತುರಘವಿಚಾರ ಇತಿ ಪ್ರಕರಣೇ ಪ್ರಾಕ್ಪ್ರತಿಪಾದಿತಂ| ಅತ್ರ ಕಶ್ಚಿದ್ವಿಶೇಷಃ | ತಥಾಚ ಸ್ಮೃತ್ಯಂತರೇ :—

ಶ್ಲೋ || ಪುನಃ ಪಿತ್ರೋಸ್ತು ಸಂಸ್ಕಾರಂ ಪ್ರಮಾದಾನ್ನಕರೋತಿ ಚೇತ್ |
ಜ್ಞಾತೀನಾಂ ದಶರಾತ್ರಂಸ್ಯಾತ್ತದೂರ್ಧ್ವಂ ಸೂತಕಂ ನಹಿ |
ನಿತ್ಯಕರ್ಮಾಣಿ ಕುರ್ವೀತ ಸ್ಮೃತ್ಯುಕ್ತಾನಿ ತಥೈವಚ | ಇತಿ ||

ಅನ್ಯತ್ರಾಪಿ ||

ಶ್ಲೋ || ವಂಶಜಾನಾಮಸಂಸ್ಕಾರೇ ಸೂತಕಂತು ಕಥಂ ಭವೇತ್ |
ದಶಾಹಾತ್ಪರತಶ್ಶುದ್ಧಿ ಜ್ಞಾತೀನಾಂಚ ವಿಶೇಷತಃ ಇತಿ ||

ಏತೇನ ಮಂತ್ರವದ್ದಹನಮಂತರೇಣಾಪಿ ಜ್ಞಾತಿಭಿ ರಾಶೌಚಾನುಷ್ಠಾನ ಮುದಕದಾನಂಚ ಕಾರ್ಯಮಿತ್ಯುಕ್ತಂ ಭವತಿ | ಪುತ್ರಸ್ಯಾಪಿ ಪುನರ್ದಹನಾತ್ಪೂರ್ವ ಮಾಶೌಚಾನುಷ್ಠಾನಮಾವಶ್ಯಕಂ ||

ಶ್ಲೋ|| ಪ್ರಮೀತಪಿತೃಕಃ ಪಿತ್ರೋ ರೌರ್ಧ್ವದೈಹಿಕಮಾಚರೇತ್ |
ಯದಿಕರ್ತುಮಶಕ್ತಸ್ಸ್ಯಾ ದಾಶೌಚನಿಯಮಾನ್ವಿತಃ |
ಆದಶಾಹಾದತೋರ್ಧ್ವಂತು ಯದಾ ಕಾರ್ಯಕ್ಷಮಸ್ತದಾ |
ತ್ರಿರಾತ್ರಂ ಸಮತಿಕ್ರಮ್ಯ ಶ್ರಾದ್ಧಂ ಕುರ್ಯಾದ್ಯಥಾವಿಧಿ |
ದಾಹಕಸ್ಯೈತದಾಶೌಚ ಮಿತರೇಷಾಂ ನವಿದ್ಯತಇತಿ ||

ಇತರೇಷಾಂ—ದತ್ತೋದಕ ಸಪಿಂಡಾನಾಮಿತ್ಯರ್ಥಃ | ಇತ್ಯಾದಿಭಿಃ ಅಂತರ್ದಶಾಹೇ ಕ್ರಿಯಾಂ ಕರ್ತುಮಶಕ್ತಸ್ಯ ಪುತ್ರಾದೇಃ ಕದಾಚಿತ್ಕ್ರಿಯಾಕರಣೇ ಮರಣಾದಿ ದಶಾಹಾಂತಂ ಗೃಹೀತಾಶೌಚಸ್ಯ ಪುತ್ರಸ್ಯ ಪುನಃಪಿತ್ರೋರ್ದಹನಾದಿ ತ್ರಿರಾತ್ರಮಾಶೌಚಂ ಭವತಿ | ಮರಣಾದಿ ಗೃಹೀತಾಶೌಚಾನಾಂ ದತ್ತೋದಕಾನಾಂ ಸಪಿಂಡಾನಾಂ ಪುನರ್ದಾಹಾದ್ಯಾಶೌಚ ಮುದಕಂಚ ನಾಸ್ತಿ | ಏತಚ್ಚ ಯಜ್ವಾಯಜ್ವನೋಃ ಸ್ಸಮಾನಮಿತಿ ವೈದ್ಯನಾಥದೀಕ್ಷಿತೈರುಕ್ತಂ ||

ಟೀ || ಆಹಿತಾಗ್ನಿಮೃತಿಯಲ್ಲಿ ದಹನಾದ್ಯಾಶೌಚಾನುಷ್ಠಾನವು ಉಕ್ತವಾದರೂ ತತ್ಪೂರ್ವದಲ್ಲಿ ವಿಧ್ಯುಕ್ತ ಸಂಧ್ಯಾವಂದನೋಪಾಸನಾದಿ ಕೆಲವು ಕರ್ಮದಲ್ಲಿ ಮಾತ್ರ ಅಧಿಕಾರವೇ ಹೊರತು ನಿತ್ಯನೈಮಿತ್ತಿಕಾದಿ ವಿಶೇಷಕರ್ಮದಲ್ಲಿ ಅಧಿಕಾರವಿಲ್ಲವು. ಈ ವಿಷಯವು ಹಿಂದೆ "ಸಾಪಿಂಡ್ಯಾಕರಣೇ ಮುಖ್ಯಕರ್ತೃಕಥವಿಚಾರಃ" ಎಂಬ ಪ್ರಕರಣದಲ್ಲಿ ತೋರಿಸಲ್ಪಟ್ಟಿದೆ. ಇನ್ನೊಂದು ವಿಶೇಷವು :—ದಶಾಹದೊಳಗೆ ಪುತ್ರಾದಿಗಳು ಕ್ರಿಯೆಯನ್ನು ನಡೆಸಲಶಕ್ತರಾದರೆ, ಮರಣದಿನಾದ್ಯಾಶೌಚವನ್ನೇ ಕ್ರಮವಾಗಿ ಅನುಷ್ಠಿಸಿ ಅನುಕೂಲವಾದಾಗ ಕ್ರಿಯಾರಂಭಮಾಡಿದ ಪುತ್ರರಿಗೆ ದಹನಾದಿ ತ್ರಿದಿನಾಶೌಚವುಂಟು. ಮರಣಾದ್ಯಾಶೌಚಾನುಷ್ಠಾನಮಾಡಿ ದತ್ತೋದಕರಾದ ಜ್ಞಾತಿಗಳಿಗೆ ದಹನಾದ್ಯಾಶೌಚವಿಲ್ಲ. ಇದು ಆಹಿತಾಗ್ನ್ಯನಾಹಿತಾಗ್ನಿಗಳಿಗಿಬ್ಬರಿಗೂ ಸಮಾನವೆಂದು ವೈದ್ಯನಾಥರು ಹೇಳಿದ್ದಾರೆ.

## || ಅಥ ರಾತ್ರಿವಿಭಾಗಃ ||

'ಪರದಿನ ಸೂರ್ಯೋದಯಾತ್ಪ್ರಾಕ್ಪೂರ್ವದಿನ ಸೂರ್ಯಾಸ್ತಮಯಾತ್ಪರಂ ಚೋಭಯತ್ರ ಪ್ರಹರಾರ್ಧಂ ಸಂಧ್ಯಾಕಾಲಂ ವಿಹಾಯ ತ್ರಿಯಾಮಾ ತೃತೀ

ಯಾಂಶೇ ಮೃತಿ ಜನ್ಮ ಋತು ಸಂಭವೇ ಪರದಿನಾದ್ಯಾಶೌಚಂ | ದ್ವ್ಯಂಶೇಽಶೇ ತ್ಪೂರ್ವದಿನಮಾರಭ್ಯಾಶೌಚಂ | ಅತ್ರ ಸೂರ್ಯೋದಯಾತ್ಪೂರ್ವಂ ಋತುವ್ಯತಿರಿಕ್ತ ಜನನಮರಣಾಶೌಚಸಂಭವೇ ಪೂರ್ವದಿನಮೇವಾಶೌಚಂ | ಸೂರ್ಯೋದಯಾತ್ಪರಂ ಸಂಭವೇ ತದ್ದಿನಮಾರಭ್ಯಾಶೌಚಮಿತಿ ಬೋಧಾಯನಾದಿ ಕೇಷಾಂಚಿದೃಷೀಣಾಂ ಮತಂ | ಅಯಂ ಪಕ್ಷಃ ಯವಕೋಟ್ಯಾದಿ ದೇಶಾಂತರ ವಿಷಯಏವೇತಿ ಶತಕ ವ್ಯಾಖ್ಯಾನಾದೌ ಪ್ರತಿಪಾದನಾತ್ ದೇಶೇಸ್ಮಿಂಸ್ತಥಾನುಷ್ಠಾನಾಭಾವಾಚ್ಚ "ತ್ರಿಯಾಮಾಯಾಃ ತೃತೀಯ್ಯಾಂಶೇ ಯದಿ ಜನ್ಮರ್ತುಮೃತ್ಯವ" ಇತ್ಯಾದಿ ವಚನಾರ್ಥೋಸ್ಮಿನ್ ದೇಶೇಽನುಷ್ಠೀಯ್ಯತೇ | ವೈದ್ಯನಾಥಪಕ್ಷೇ ಆರ್ತವವಿಷಯೇ ಶತಕಕಾರ ಮತಮಂಗೀಕೃತಂ | ಜನನಮರಣಯೋಸ್ತು ಅರುಣೋದಯಾದ್ಯೇ ವಾಪರದಿನಂ ಗ್ರಾಹ್ಯಮಿತಿಚ ಭಾತಿ | ಸ್ವಸ್ವ ದೇಶಾಚಾರಾನುಸಾರೇಣ ವ್ಯವ ಸ್ಥೇತ್ಯುಕ್ತಂ |

ಟೀ || ಸ್ವದೇಶಾಹಃಪ್ರಮಾಣವನ್ನಿಟ್ಟು ಪೂರ್ವದಿನ ಸೂರ್ಯಾಸ್ತಾತ್ಪರ ಮೂರೂಮುಕ್ಕಾಲು ಘಳಿಗೆಯನ್ನೂ ಪರದಿನ ಸ್ವದೇಶಸೂರ್ಯೋದಯಾತ್ಪೂರ್ವ ಮೂರೂಮುಕ್ಕಾಲು ಘಳಿಗೆಯನ್ನೂ ಕಳೆದರೆ ಮಿಕ್ಕ ಸ್ವದೇಶ ರಾತ್ರಿಪ್ರಮಾಣವು ಮೂರುಯಾಮವಾಯಿತು. ಈ ರಾತ್ರಿಪ್ರಮಾಣವನ್ನು ಮೂರು ಭಾಗಮಾಡಿ ಆ ಎರಡುಭಾಗವನ್ನೂ ಸಾಯಂಸಂಧ್ಯಾ ಸುಮಾರು ಮೂರೂ ಮುಕ್ಕಾಲು ಘಳಿಗೆ ಯನ್ನೂ ಸೇರಿಸಿದರೆ ಅದು ತ್ರಿಯಾಮಾ ಎರಡಂಶವಾಯಿತು. ಅಹಃಪ್ರಮಾಣವು ಮೂವತ್ತು ಘಳಿಗೆ ಸಮಾನವಾಗಿದ್ದದಿವಸ ರಾತ್ರಿಯ ಎರಡಂಶ ಅಂದರೆ ಪೂರ್ವೋ ತ್ತರ ಸಂಧ್ಯಾಕಾಲ ಏಳೂವರೆ ಘಳಿಗೆಯನ್ನು ಕಳೆದು ನಿಂತದ್ದು ರಾತ್ರಿಪ್ರಮಾ ಣವು ಇಪ್ಪತ್ತೆರಡೂವರೆ ಘಳಿಗೆಯಾಯಿತು. ಅದರಿಂದ ತ್ರಿಯಾಮಾ ಎಂದು ಸಂಕೇತವು | ಪೂರ್ವಸಂಧ್ಯಾ ಮೂರೂಮುಕ್ಕಾಲು ಘಳಿಗೆಗೆ ಹಿಂದೆಹೇಳಿದ ಇಪ್ಪತ್ತೆರಡೂವರೆ ಘಳಿಗೆಯ ಮೂರನೇಎರಡು ಭಾಗವಾದ ಹದಿನ್ನೈದು ಘಳಿಗೆ ಯನ್ನು ಸೇರಿಸಿದ್ದಲ್ಲಿ ರಾತ್ರಿ ಹದಿನೆಂಟೂಮುಕ್ಕಾಲು ಘಳಿಗೆಯಾಯಿತು. ಇದೇ ರೀತಿ ಆಯಾಯದಿನದ ಸ್ವದೇಶಾಹಃಪ್ರಮಾಣ ರಾತ್ರಿಪ್ರಮಾಣಗಳನ್ನು ವಿಭಾಗ ಮಾಡಿಕೊಂಡು ತಿಳಿಯಬೇಕು. ಸರಾಸರಿ ರಾತ್ರಿಪ್ರಮಾಣ ಹೆಚ್ಚಿದ್ದಕಾಲದಲ್ಲಿ ಚತ್ತೊಂಭತ್ತೂ ಮುಕ್ಕಾಲು ಘಳಿಗೆವರೆಗೂ ರಾತ್ರಿಪ್ರಮಾಣವು ಕಡಮೆಯಾ ಗಿದ್ದ ಕಾಲದಲ್ಲಿ ಹದಿನೇಳೂವರೆ ಘಳಿಗೆಯುವರೆಗೂ ರಾತ್ರಿಯ ಎರಡಂಶವು ಬರು

ವುದು. ಎರಡಂಶಕಾಲದೊಳಗಾಗಿ ಆರ್ತ್ತವ ಜನನ ಮರಣಗಳು ಸಂಭವಿಸಿದರೆ ಆ ದಿನವೊದಲು ಆಶೌಚಾನುಷ್ಠಾನಕ್ಕೆ ದಿನಗಣನೆಯು. ರಾತ್ರಿಯ ಮೂರನೇ ಅಂಶ ದಲ್ಲಾದರೆ ಪರದಿನಮೊದಲು ಆಶೌಚಾನುಷ್ಠಾನಕ್ಕೆ ದಿನಗಣನೆಯು. ಇದೇ ಈ ದೇಶಗಳಲ್ಲಿ ಪ್ರಾಯಶಃ ಆಚಾರದಲ್ಲಿದೆ. ಸೂರ್ಯೋದಯಾತ್ಪೂರ್ವ ಆರ್ತ್ತವವಲ್ಲದೇ ಜನನಮರಣ ಸಂಭವಿಸಿದರೆ ಪೂರ್ವದಿನವೇ ಗಣನೆಯೆಂತಲೂ ಸೂರ್ಯೋದಯಾ ನಂತರ ಸಂಭವಿಸಿದರೆ ಪರದಿನಮೊದಲು ಗಣನೆಯೆಂತಲೂ ಬೋಧಾಯನಾದಿ ಕೆಲವು ಋಷಿಗಳ ಮತವು. ಇದು ಯವಕೋಟ್ಯಾದಿ ದೇಶವಿಷಯವೇ ಹೊರತು ಈ ಭರತಖಂಡ ವಿಷಯವಲ್ಲವೆಂದ. ವೈದಿಕಸಾರ್ವಭೌಮರಿಂದ ಆಶೌಚಶತಕವೆಂಬ ನಿಬಂಧನಗ್ರಂಥದಲ್ಲಿ ನಿರ್ಧರಿಸಲ್ಪಟ್ಟಿದೆ. ವೈದ್ಯನಾಥರ ಮತದಲ್ಲಿ ಆರ್ತ್ತವಹೊರತು ಜನನಮರಣಕ್ಕೆ ಅರುಣೋದಯಾತ್ಪೂರ್ವದಲ್ಲಿ ಪೂರ್ವದಿನವೆಂತಲೂ, ಅರುಣೋದ ಯಾನಂತರ ಪರದಿನವೆಂತಲೂ ಗಮಕವಾಗಿ ತೋರುತ್ತದೆ. ಈ ಬೋಧಾಯನ ಮತವು ಯಾರಲ್ಲಿ ಕುಲಕ್ರಮಾಗತಾಚಾರವಾಗಿ ಬಂದಿದೆಯೋ ಅವರುಮಾತ್ರ ಅದನ್ನು ಅನುಷ್ಠಿಸಬೇಕು.

## ॥ ದತ್ತಾಶೌಚ ವಿಷಯಃ ॥

ಕೇವಲ ದತ್ತಸ್ಯ ಪ್ರತಿಗೃಹೀತೃ ಮಾತಾಪಿತೃ ಭ್ರಾತ್ರಾದಿ ಸಪಿಂಡಾನಾಂ ಮರಣೇ ದಶಾಹಮಾಶೌಚಂ । ದತ್ತಮರಣೇಪಿ ತೇಷಾಂ ದಶಾಹಮೇವ । ಸ್ವೀಕೃತ ಮಾತೃ ಪಿತೃ ಯೋನಿಬಂಧು ಜನಾಶೌಚಂ ಸರ್ವಮನುಷ್ಠೇಯಂ । ಜನಕಪಿತ್ರೋಃ ಭ್ರಾತ್ರ್ಯಾಣಾಂಚ ಮರಣೇ ದತ್ತಸ್ಯ ತ್ರ್ಯಹಮೇವ ॥ ದತ್ತ ಮರಣೇಪಿ ತೇಷಾಂ ತ್ರ್ಯಹಂ । ಜನಕಸ್ಯ ಪುತ್ರಾಂತರಾಭಾವೇ ಸ್ವಯಂ ಪೈತೃಕ ಕರ್ಮಕರಣಪಕ್ಷೇ ದಶರಾತ್ರಂ । ಅನಪತ್ಯ ಜನಕಭ್ರಾತೃಮರಣೇ ಕರ್ಮಕರಣ ಪಕ್ಷೇ ದಶರಾತ್ರಂ । ಕೇವಲ ದತ್ತಸ್ಯ ಪುತ್ರಜನನೇ ಜನಕಪಿತ್ರಾದೀನಾಂ ನಾಶೌಚಂ । ದತ್ತಸ್ಯ ಪುತ್ರಮರಣೇತು ಸ್ನಾನಮಾತ್ರಂ । ಜನಕಸ ಕರ್ತೃತ್ವ ಸಂಭವೇಪಿ ಕೇವಲದತ್ತಸ್ಯ ತತ್ಸಪಿಂಡಾದ್ಯಾಶೌಚಂ ನಾಸ್ತಿ । ಏಕರಾತ್ರ ಮಿತ್ಯೇಕೇ ।

ಟೀ ॥ ಕೇವಲ ದತ್ತಪುತ್ರನಿಗೆ ಪ್ರತಿಗೃಹೀತೃ ಮಾತಾಪಿತೃ ಭ್ರಾತ್ರಾದಿ ಸರ್ವಸಪಿಂಡಾಶೌಚವೂ, ಸ್ವೀಕೃತ ಮಾತೃಪಿತೃ ಯೋನಿಬಂಧುಜನ ಸಂಬಂಧಾ ಶೌಚವೂ ದಶಾಹ ತ್ರ್ಯಹಾದಿ ಕ್ರಮವಾಗಿ ಉಂಟು. ಜನಕಮಾತಾಪಿತೃ

ಭ್ರಾತೃಗಳ ಮೃತಿಯಲ್ಲಿ ದತ್ತಪುತ್ರನಿಗೂ ದತ್ತಪುತ್ರನ ಮರಣದಲ್ಲಿ ತತ್ಪ್ರತಿಯೋಗಿಗಳಿಗೂ ಪರಸ್ಪರ ಮೂರುದಿನಾಶೌಚವುಂಟು. ಜನಕತಂದೆಗೂ, ತಾಯಿಗೂ, ಪುತ್ರರಿಲ್ಲದ ಭ್ರಾತೃಗಳಿಗೂ ದತ್ತನು ತಾನೇ ಕರ್ತನಾದ ಪಕ್ಷದಲ್ಲಿ ದಶಾಹಾಶೌಚವುಂಟು. ದತ್ತನಿಗೆ ಪುತ್ರಜನನವಾದರೆ ಜನಕಪಿತ್ರಾದಿಗಳಿಗೆ ಆಶೌಚವಿಲ್ಲ. ದತ್ತನ ಪುತ್ರಮರಣದಲ್ಲಿ ಸ್ನಾನಮಾತ್ರವು. ಪುತ್ರಾಂತರರಿಲ್ಲದ ಜನಕನಿಗೆ ದತ್ತನು ಕರ್ತೃವಾದಾಗ್ಯೂ ಜನಕಸಪಿಂಡಾದ್ಯಾಶೌಚವಿಲ್ಲ. ಒಂದುದಿನಾಶೌಚವುಂಟೆಂದು ಕೆಲವರ ಪಕ್ಷವು.

## ॥ ದತ್ತದ್ವ್ಯಾಮುಷ್ಯಾಯಣ ವಿಷಯಃ ॥

ಉಪನಯನಾನಂತರಂ ದತ್ತೈಃ ಸೀಮಂತಜ್ಯೇಷ್ಠದತ್ತ ದ್ವ್ಯಾಮುಷ್ಯಾಯಣೈಃ, ಏಕಪುತ್ರದತ್ತದ್ವ್ಯಾಮುಷ್ಯಾಯಣೈಃ, ದತ್ತಹೋಮರಹಿತಂ ದತ್ತೈಃ ಪಂಚವರ್ಷಾನಂತರಂ ಪ್ರೀತ್ಯಾಪಾಲಿತೈಃ ಏತ್ಯೈರನಿಯತದತ್ತೈಶ್ಚ ಉಭಯ ಗೋತ್ರ ಜನನಮರಣಾಶೌಚಂ ಸರ್ವಮನುಷ್ಠೇಯಂ | ನತು ಪ್ರತಿಗೃಹೀತೃ ಸಪಿಂಡಾದ್ಯಾಶೌಚಮಾತ್ರಂ |

ಟೀ ॥ ಉಪನಯನಾನಂತರ ದತ್ತು ಆದವನು. ಸೀಮಂತ ಜ್ಯೇಷ್ಠಪುತ್ರ ದತ್ತು ಆದವನು ಏಕಪುತ್ರ ದತ್ತು ಆದವನು, ದತ್ತಹೋಮ ನಿಯಮಾದಿಗಳಿಲ್ಲದೆ ದತ್ತುವಾದವನು, ಜನ್ಮಾದಿ ಐದುವರ್ಷಕ್ಕೆ ಮೇಲೆ ಪ್ರೀತಿಯಿಂದ ರಕ್ಷಿಸಲ್ಪಟ್ಟವನು ಈ ಐದುವಿಧ ಜನರೂ ಅನಿಯತ ದತ್ತರೆಂದೂ, ಅಥವಾ ದತ್ತದ್ವ್ಯಾಮುಷ್ಯಾಯಣರೆಂದೂ ಹೇಳಲ್ಪಡುವರು.

ಈ ದತ್ತಪುತ್ರರುಗಳಿಂದ ಜನಕ, ಸ್ವೀಕೃತ ಈ ಎರಡು ಗೋತ್ರ ಸಂಬಂಧವಾದ ಸಪಿಂಡಾದಿ ಬಂಧುಗಳ ಜನನಮರಣಾಶೌಚ ಸರ್ವವೂ ಅನುಷ್ಠಿಸಲ್ಪಡತಕ್ಕದ್ದು. ಕಲಿಯುಗದಲ್ಲಿ ದ್ವ್ಯಾಮುಷ್ಯಾಯಣತ್ವವು ಅಂಗೀಕಾರವಿಲ್ಲವು. ಉಪನೀತ, ಸೀಮಂತಪುತ್ರ, ಏಕಪುತ್ರ ಇವರುಗಳನ್ನು ದತ್ತು ಕೊಡಬಾರದೆಂದು ದತ್ತಚಂದ್ರಿಕಾದಿ ಗ್ರಂಥಗಳಲ್ಲಿ ಹೇಳಲ್ಪಟ್ಟಿದೆ ಇಂಥವರ ದತ್ತುವು ಕೆಲವು ದೇಶಗಳಲ್ಲಿರುವುದರಿಂದ ದತ್ತು ಸಲ್ಲುತ್ತದೆಂದು ರಾಜರುಗಳು ನಿಬಂಧನೆ ಮಾಡಿದ್ದರಿಂದ ಯಾವ ದೇಶಗಳಲ್ಲಿ ಇಂಥ ದತ್ತು ನಡೆದು ಆಚಾರದಲ್ಲಿ ಬಂದಿದೆಯೋ ಅಲ್ಲಿ ಅಂಥ ದತ್ತಪುತ್ರರು ಉಭಯ ಗೋತ್ರಾಶೌಚವನ್ನೂ ಅನುಷ್ಠಾನ ಮಾಡಬೇಕು. ಈ ಕರ್ಣಾಟದೇಶದಲ್ಲೂ ಇಂಥಾ ದತ್ತುಗಳು ಕೆಲವು ನಡೆದುಬರುತ್ತವೆಯಾದರೂ

ಆಶೌಚಾನುಷ್ಠಾನವನ್ನು ಮಾತ್ರ ಉಭಯ ಗೋತ್ರದಲ್ಲೂ ನಡೆಸುವುದಾಗಿ ತೋರಿ ಬರುವುದಿಲ್ಲ. ನಿಯತದತ್ತನೇ, ಅಥವಾ ಅನಿಯತ ದತ್ತನೇ ಎಂಬ ವಿಷಯವನ್ನು ನಿರ್ಧರಿಸಿಕೊಂಡು ಆಶೌಚಾನುಷ್ಠಾನ ಮಾಡತಕ್ಕದ್ದು ಶಾಸ್ತ್ರಸಮ್ಮತವೆಂದು ವಿರಾಮ ಮಾಡಿರುತ್ತೇನೆ.

**ಕೇವಲದತ್ತಸ್ಯ ಜನಕಪಿತುಃ ಕರ್ತೃತ್ವಸಂಭವೇ ತದ್ವಿಷಯಕ ಮಾತಾಮಹಾಶೌಚಂ ||**

ಕೇವಲ ದತ್ತಸ್ಯ ಜನಕಪಿತೃ ಕರ್ತೃತ್ವಸಂಭವೇ ತದ್ವಿಷಯಕ ಮಾತಾಮಹಾದ್ಯಾಶೌಚಮಪ್ಯನುಷ್ಠೇಯಂ ಭವತಿ |

ಟೀ || ನಿಯತದತ್ತನಿಗೆ ಜನಕಪಿತೃವಿನ ಕರ್ತೃತ್ವ ಸಂಭವಿಸಿದ ಪಕ್ಷದಲ್ಲಿ ತದ್ವಿಷಯಕ ಮಾತಾಮಹಾದ್ಯಾಶೌಚವುಂಟು. ಜನಕಪಿತೃ ಜ್ಞಾತ್ಯಾಶೌಚ ವುಂಟೆಂದು ಕೆಲವರು ಹೇಳುತ್ತಾರೆ. ಅದು ಸರ್ವತ್ರ ಆಚಾರದಲ್ಲಿಲ್ಲವು. ಜನಕ ಮಾತಾಮಹಾದ್ಯಾಶೌಚವಾದರೋ ಏಕದಿನ ಉಂಟೆಂಬ ವಿಷಯವು ಮುಂದೆ ದಿನಾಶೌಚನಿರ್ಣಯ ಪ್ರಕರಣದಲ್ಲಿ ವಿವರಿಸಲ್ಪಡುತ್ತದೆ.

**ಇತಿ ಸಪಿಂಡಾಶೌಚನಿರ್ಣಯಃ.**

---

**|| ಅಸಗೋತ್ರ ತ್ರಿರಾತ್ರಾಶೌಚಂ ||**

ಪುತ್ರೀಮರಣೇ ಪಿತ್ರೋಸ್ತ್ರ್ಯಹಂ | ಪಿತ್ರೋರ್ಮರಣೇ ಊಢಾಯಾಃ ಪುತ್ರ್ಯಾಸ್ತ್ರಿದಿನಂ | ಊಢಾಯಾಃ ಕರ್ತೃತ್ವಸಂಭವೇ ದಶರಾತ್ರಂ | ಕರ್ತೃತ್ವಸಂಭವೇಪಿ ತ್ರ್ಯಹಮಿತ್ಯೇಕೇ |

ಟೀ || ವಿವಾಹಿತ ಪುತ್ರೀಮರಣದಲ್ಲಿ ಮಾತಾಪಿತೃಗಳಿಗೆ ತ್ರಿದಿನವು. ಮಾತಾ ಪಿತೃಗಳ ಮರಣದಲ್ಲಿ ವಿವಾಹಿತ ಪುತ್ರಿಗೂ ತ್ರಿದಿನವು. ವಿವಾಹಿತ ಪುತ್ರಿಗೆ ಕರ್ತೃತ್ವ ಸಂಭವಿಸಿದಲ್ಲಿ ದಶರಾತ್ರವೆಂದು ಶತಕಪಕ್ಷವು. ಕರ್ತೃತ್ವಸಂಭವದಲ್ಲೂ ತ್ರಿದಿನ ವೆಂದು ಇತರರಪಕ್ಷವು.

**|| ಉಪನೀತ ದೌಹಿತ್ರ ಭಾಗಿನೇಯಾದಿ ಮೃತೌ ||**

ಉಪನೀತ ದೌಹಿತ್ರ ಭಾಗಿನೇಯ ಮೃತೌ ಮಾತಾಮಹ ಮಾತಾಮಹ್ಯೋಃ ಮಾತೃಷ್ವಸೃ ಮಾತುಳಯೋಃ ಸ್ತ್ರಿದಿನಂ | ಮಾತಾಮಹೀ ಮಾತಾ

ಮಹಯೋಃ ಮಾತೃಷ್ವಸ್ರ ಮಾತುಳಯೋರ್ಮೃತೌ ದೌಹಿತ್ರ ಭಾಗಿನೇಯ ಯೋಸ್ತ್ರ್ಯಹಂ |

ಟೀ || ಮಗಳಮಗನೂ, ಅಕ್ಕತಂಗಿಯರ ಮಗನೂ ಉಪನೀತರಾಗಿ ಮೃತರಾದರೆ ಮೃತನ ಮಾತಾಮಹ, ಮಾತಾಮಹಿ, ಸೋದರಮಾವ, ತಾಯಿಯ ಅಕ್ಕತಂಗಿಯರುಗಳು ಮೂರುದಿನಾಶೌಚಿಗಳು. ಇವರುಗಳು ಮೃತರಾದರೆ ದೌಹಿತ್ರಭಾಗಿನೇಯರಿಗೂ ಮೂರುದಿನಾಶೌಚವು.

N, B. ದೌಹಿತ್ರನೆಂದರೆ ಮಗಳಮಗ; ಭಾಗಿನೇಯನೆಂದರೆ ಅಕ್ಕತಂಗಿಯರ ಮಗ; ಮಾತಾಮಹ ಮಾತಾಮಹಿಯೆಂದರೆ ತಾಯಿಯತಂದೆಯು ಮತ್ತು ತಾಯಿಯು; ಮಾತೃಷ್ವಸೃ ಎಂದರೆ ತಾಯಿಯ ಕೂಡ ಹುಟ್ಟಿದ ಅಕ್ಕತಂಗಿಯರು; ಪಿತೃಷ್ವಸೃ ಎಂದರೆ ತಂದೆಯ ಕೂಡ ಹುಟ್ಟಿದ ಅಕ್ಕತಂಗಿಯರು; ಮಾತುಳನೆಂದರೆ ಸೋದರಮಾವ; ಸ್ವಸೃ ಎಂದರೆ ಕೂಡ ಹುಟ್ಟಿದ ಅಕ್ಕತಂಗಿಯರು; ಪಿತೃವ್ಯರೆಂದರೆ ತಂದೆಯಕೂಡ ಹುಟ್ಟಿದ ಅಣ್ಣತಮ್ಮಂದಿರು; ಶ್ವಶ್ರೂ ಶ್ವಶುರ ಎಂದರೆ ಹೆಣ್ಣುಕೊಟ್ಟ ಅತ್ತೆಮಾವಂದಿರು; ಭಾವುಕನೆಂದರೆ ಅಕ್ಕತಂಗಿಯರ ಗಂಡಂದಿರು; ಸ್ಯಾಲ ಎಂದರೆ ಹೆಂಡತಿಯ ಕೂಡ ಹುಟ್ಟಿದ ಅಣ್ಣತಮ್ಮಂದಿರು; ಸಪತ್ನೀ ಎಂದರೆ ಸವತಿಯರುಗಳು; ನನಾಂದಾ ಎಂದರೆ ಗಂಡನ ಕೂಡ ಹುಟ್ಟಿದ ಅಕ್ಕತಂಗಿಯರು; ಯಾತಾ ಎಂದರೆ ಓರಗಿತ್ತಿಯರು. ಈ ಪದಗಳಿಗೆ ಅರ್ಥವನ್ನು ಮುಂದೆಯೂ ಇದರಂತೆ ತಿಳಿದುಕೊಳ್ಳಬೇಕು.

## || ಅನುಪನೀತ ದೌಹಿತ್ರಭಾಗಿನೇಯಾದಿ ಮೃತಿವಿಷಯೇ ||

ಚೌಳಾತ್ಪರಮನುಪನೀತ ದೌಹಿತ್ರ ಭಾಗಿನೇಯ ಮೃತೌ ತತ್ಪ್ರತಿಯೋಗಿನಾಂ ಪಕ್ಷಿಣೀ | ಚೌಳಾತ್ಪ್ರಾಕ್ಸದ್ಯಸ್ಸ್ನಾನಂ | ಅನುಪನೀತಸ್ಯಾಪಿ ಗರ್ಭಾಷ್ಟಮೇ ವರ್ಷೇ ಮೃತೌ ತ್ರಿದಿನಂ | ಅನುಪನೀತ ಮಾತುಳ, ಅನೂಢ ಮಾತೃಷ್ವಸೃ ಮೃತೌ ಭಾಗಿನೇಯಸ್ಯ ಸದ್ಯಶ್ಶೌಚಂ |

ಟೀ || ಚೌಳಾನಂತರ ಉಪನಯನಾತ್ಪೂರ್ವ ದೌಹಿತ್ರ ಭಾಗಿನೇಯರ ಮೃತಿಯಲ್ಲಿ ತತ್ಪ್ರತಿಯೋಗಿಗಳಿಗೆ ಪಕ್ಷಿಣೀ | ಚೌಳಾತ್ಪೂರ್ವದಲ್ಲಿ ಸ್ನಾನವು. ಅನುಪನೀತನಾಗಿದ್ದರೂ ಗರ್ಭಾಷ್ಟಮ ವರ್ಷ ಮೃತಿಯಾದರೆ ತ್ರಿದಿನವು. ಭಾಗಿನೇಯನಿಗೆ ಅನುಪನೀತ ಸೋದರಮಾವನ ಮತ್ತು ಮದುವೆಯಿಲ್ಲದ ಮಾತೃಭಗಿನಿಯರ ಮೃತಿಯಲ್ಲಿ ಸ್ನಾನವು.

## ॥ ಭಗಿನೀಮೃತೌ ಪಿತೃಷ್ವಸೃಮೃತೌಚ ॥

ಊಢಭಗಿನ್ಯಾಮೃತೌ ಭ್ರಾತುಸ್ತ್ರಿದಿನಂ, ಭ್ರಾತೃಮೃತೌ ಭಗಿನ್ಯಾಸ್ತ್ರ್ಯಹಂ, ಪಿತೃಷ್ವಸೃಮೃತೌ ಭ್ರಾತೃಪುತ್ರಸ್ಯ ತ್ರ್ಯಹಂ । ತನ್ಮೃತೌ ಪಿತೃಷ್ವಸುಸ್ತ್ರ್ಯಹಂ, ಪರೋಕ್ಷೇ ಪಕ್ಷಿಣೀತಿ ಕೇಚಿತ್ ॥

ಟೀ ॥ ವಿವಾಹವಾದ ಅಕ್ಕತಂಗಿಯರು ಮೃತರಾದರೆ ಅಣ್ಣತಮ್ಮಂದಿರಿಗೆ ಮೂರು ದಿನವು. ಅಣ್ಣತಮ್ಮಂದಿರ ಮರಣದಲ್ಲಿ ಅಕ್ಕತಂಗಿಯರಿಗೂ ಮೂರು ದಿನವು. ಪಿತೃ ಭಗಿನಿಯರ ಮರಣದಲ್ಲಿ ಸೋದರಳಿಯನಿಗೆ ತ್ರಿರಾತ್ರವು. ಸೋದರಳಿಯನ ಮರಣದಲ್ಲಿ ಸೋದರತ್ತೆಗೂ ತ್ರಿದಿನವು. ಇದು ಸಾನ್ನಿಧ್ಯದಲ್ಲಿದ್ದರೆ. ಪರೋಕ್ಷದಲ್ಲಿದ್ದರೆ ಪಕ್ಷಿಣೀ ಎಂದು ಕೆಲವರ ಮತವು.

## ॥ ಶ್ವಶ್ರೂಶ್ವಶುರಯೋರ್ಮೃತೌ ಆಚಾರ್ಯಾದಿ ಮೃತೌಚ ॥

ಶ್ವಶ್ರೂಶ್ವಶುರಯೋರ್ಮರಣೇ ಜಾಮಾತುಸ್ತ್ರ್ಯಹಂ- ಪರೋಕ್ಷೇ ಪಕ್ಷಿಣೀತ್ಯಘವಿವೇಚನೇ । ಸ್ವಭಾರ್ಯಾಮೃತ್ಯನಂತರಂ ತತ್ಪಿತ್ರೋರ್ಮೃತೌ ದಿನಂ । ತತ್ಸಂತತಿ ಸದ್ಭಾವೇ ತ್ರಿದಿನಂ । ಜಾಮಾತೃ ಮೃತೌ ಶ್ವಶ್ರ್ವೋರ್ನಾಶೌಚಂ । ಕಿಂತು ಸ್ನಾನಮಾತ್ರಂ । ಆಚಾರ್ಯ ತತ್ಪತ್ನೀ ತತ್ಪುತ್ರ ಋತ್ವಿಗ್ಯಾಜ್ಯಂತೇವಾಸಿನಾಂ ಮೃತೌ ಪರಸ್ಪರಂ ತ್ರಿದಿನಂ ।

ಟೀ ॥ ಹೆಣ್ಣುಕೊಟ್ಟ ಅತ್ತೆಮಾವಂದಿರ ಮೃತಿಯಲ್ಲಿ ಅಳಿಯನಿಗೆ ಮೂರು ದಿನವು. ಪರೋಕ್ಷದಲ್ಲಿ ಪಕ್ಷಿಣೀ ಎಂದು ಅಘವಿವೇಚನದಲ್ಲಿದೆ. ತನ್ನ ಪತ್ನಿಯ ಮರಣಾನಂತರ ಅತ್ತೆಮಾವಂದಿರ ಮೃತಿಯಲ್ಲಿ ಒಂದು ದಿನವು. ಅವಳಿಗೆ ಸಂತತಿ ಇದ್ದ ಪಕ್ಷದಲ್ಲಿ ಅಳಿಯನಿಗೆ ಮೂರು ದಿನವು. ಅಳಿಯನ ಮರಣದಲ್ಲಿ ಅತ್ತೆಮಾವಂದಿರಿಗೆ ಆಶೌಚವಿಲ್ಲ; ಸ್ನಾನಮಾತ್ರವು. ಆಚಾರ್ಯ ತತ್ಪತ್ನೀ ಪುತ್ರರುಗಳ ಮತ್ತು ಕುಲಕ್ರಮಾಗತ ಋತ್ವಿಗ್ಯಜಮಾನರುಗಳ ಮತ್ತು ಸಾಂಗವೇದಾಧ್ಯಾಯಿ ಶಿಷ್ಯ ಇವರುಗಳ ಮೃತಿಯಲ್ಲಿ ಪರಸ್ಪರ ತ್ರಿದಿನವು.

## ॥ ಸ್ವಗೃಹೇ ಶ್ರೋತ್ರಿಯ ಮೃತೌ ॥

ಸ್ವಗೃಹೇ ಶ್ರೋತ್ರಿಯೇ ಪ್ರೇತೇ ತ್ರ್ಯಹಂ । ಅಶ್ರೋತ್ರಿಯೇ ದಿನಂ । ಇತರಸ್ವವಾಸಸ್ಥಳೇ ಶ್ರೋತ್ರಿಯಮೃತೌ ಸ್ತ್ರೀಮೃತೌವಾ ನಿರ್ಗಮನಾಚ್ಛುದ್ಧಿಃ । ಗ್ರಾಮೇ ಶ್ರೋತ್ರಿಯ ಮೃತೌ ದಿನಂ । ಅಶ್ರೋತ್ರಿಯೇ ನಾಸ್ತ್ಯಶೌಚಂ । ಏಕಶಾಖಾಧ್ಯಾಯೀ ಶ್ರೋತ್ರಿಯಃ ॥

ಟೀ || ತನ್ನ ಮನೆಯಲ್ಲಿ ಶ್ರೋತ್ರಿಯನು ಮೃತನಾದರೆ ತ್ರಿದಿನಾಶೌಚವು. ಶ್ರೋತ್ರಿಯನಲ್ಲದ ಪಕ್ಷದಲ್ಲಿ ಒಂದುದಿನಾಶೌಚವು. ಸ್ವಗೃಹವಲ್ಲದೆ ಇತರತ್ರ ತಾನು ವಾಸಮಾಡುವ ಕಡೆ ಶ್ರೋತ್ರಿಯನ ಮರಣದಲ್ಲಿಯೂ ಸ್ತ್ರೀಮರಣ ದಲ್ಲಿಯೂ ಶವನಿರ್ಗಮನಾನಂತರ ಶುದ್ಧಿಯು. ಗ್ರಾಮದಲ್ಲಿ ಶ್ರೋತ್ರಿಯನು ಮೃತನಾದರೆ ಒಂದುದಿನಾಶೌಚವು. ಶ್ರೋತ್ರಿಯನಲ್ಲದವನ ಮೃತಿಯಲ್ಲಿ ಆಶೌಚ ವಿಲ್ಲ. ಶ್ರೋತ್ರಿಯನೆಂದರೆ ಒಂದು ವೇದವನ್ನು ಪೂರ್ಣವಾಗಿ ಗುರುಮುಖೀನ ಅಧ್ಯಯನ ಮಾಡಿದವನು. ಗ್ರಾಮದಲ್ಲಿ ಶ್ರೋತ್ರಿಯ ಮೃತಿಯಲ್ಲಿ ಒಂದುದಿನಾ ಶೌಚವನ್ನು ಬಹುಶಃ ಅನುಷ್ಠಾನ ಮಾಡುವುದಿಲ್ಲವು. ೧೦೦ ಮನೆಗೆ ಕಡಮೆ ಯಾದ ಊರಿಗೆ ಗ್ರಾಮವೆಂದು ಹೆಸರು.

## || ಪಿತೃಗೃಹೇ ಪುತ್ರೀಪ್ರಸವೇ ||

ಪಿತೃಗೃಹೇ ಪುತ್ರೀಪ್ರಸವೇ ಪಿತ್ರೋಸ್ಸೋದರಾಣಾಂ ತ್ರ್ಯಹಂ | ಅನ್ಯ ಗೃಹೇ ಚೇನ್ನಾಸ್ತ್ಯಾಶೌಚಂ | ಗೃಹಾಭಾವೇಪಿ ಸ್ವವಾಸಸ್ಥಾನಂಪ್ರತಿ ಪ್ರಸ ವಾರ್ಥಂ ಪ್ರತ್ಯಾನಯನಂ, ತದರ್ಥಮರ್ಥಪ್ರದಾನಾದಿ ತದ್ಭಾರ ವಹನಾಚ್ಚ ಪುತ್ರೀಪ್ರಸವೇ ತ್ರಿದಿನಂ | ಪಿತೃವ್ಯ ಮಾತುಳಾನಾಂ ಗೃಹೇಚೇತ್ತೇಷಾಂ ದಿನಂ | ನೈತದ್ವ್ಯತಿರಿಕ್ತ ಬಂಧೂನಾಮಾಶೌಚಂ | ಪುತ್ರ್ಯಾಃ ಪ್ರಸವ ನಿಮಿತ್ತ ತ್ರ್ಯಹ ಜನನಾಶೌಚಮಧ್ಯೇ ಜ್ಞಾತಿನಿಮಿತ್ತಕ ಜನನಮರಣಾದ್ಯಾಶೌಚ ಸಂಭವೇ ಜ್ಞಾ ತ್ಯಾದಿನಿಮಿತ್ತಾಶೌಚ ಮೇವಾನುಷ್ಠೇಯಂ | ಪುತ್ರೀಪ್ರಸವ ನಿಮಿತ್ತಾಶೌಚ ಸ್ಯನೈಯ್ಯತ್ಯಾಭಾವಾತ್ |

ಟೀ|| ತಂದೆಯ ಮನೆಯಲ್ಲಿ ಮಗಳು ಪ್ರಸವಿಸಿದರೆ ಅವಳ ತಂದೆ, ತಾಯಿ, ಸೋದರರಿಗೆ ಮೂರುದಿನಾಶೌಚವು. ಅನ್ಯರ ಮನೆಯಲ್ಲಾದರೆ ತಂದೆ ಮೊದ ಲಾದವರಿಗೆ ಆಶೌಚವಿಲ್ಲ. ತನ್ನ ಸ್ವಂತಮನೆ ಯಿಲ್ಲದೇ ಇದ್ದಾಗ್ಯೂ ತಾನು ವಾಸಮಾಡುವ ಮನೆಗೆ ಕರೆದುಕೊಂಡು ಬರುವುದಾಗಲೀ, ದ್ರವ್ಯಸಹಾಯಾದಿ ಪ್ರಸವಕಾರ್ಯ ನಿರ್ವಾಹವಮಾಡುವುದಾಗಲೀ ಇದ್ದರೆ ತಂದೆ ಮೊದಲಾದವರಿಗೆ ಮೂರುದಿನಾಶೌಚವು. ಚಿಕ್ಕಪ್ಪ, ದೊಡ್ಡಪ್ಪ, ಸೋದರಮಾವ ಈ ಬಂಧುಗಳ ಮನೆಯಲ್ಲಿ ಪ್ರಸವಿಸಿದರೆ ಇವರುಗಳಿಗೆ ಒಂದುದಿನಾಶೌಚವು. ಇವರಿಗಿಂತ ಬೇರೆ ಯಾದ ಬಂಧುಗಳ ಮನೆಯಲ್ಲಾದರೆ ಆ ಬಂಧುಗಳಿಗೆ ಆಶೌಚವಿಲ್ಲ. ತನ್ನ ಮನೆ ಯಲ್ಲಿ ತನ್ನ ಮಗಳು ಪ್ರಸವಿಸಿ ಆ ನಿಮಿತ್ತವಾಗಿ ಮೂರು ದಿನ ಪ್ರಾಪ್ತವಾದ

ಜನನಾಶೌಚ ಮಧ್ಯದಲ್ಲಿ ಜ್ಞಾತಿನಿಮಿತ್ತಕ ಜನನಮರಣಾಶೌಚ ಬಂದರೆ ಜ್ಞಾತಿನಿಮಿತ್ತಕವಾಗಿ ಬಂದ ಆಶೌಚವನ್ನೇ ಅನುಷ್ಠಾನ ಮಾಡಬೇಕು. ಮಗಳು ಪ್ರಸವಿಸಿದ ಆಶೌಚವು ನಿತ್ಯವಲ್ಲವಾದ್ದರಿಂದ ಜ್ಞಾತ್ಯಾಶೌಚಕ್ಕೆ ಪ್ರಾಬಲ್ಯವು. ( ಮಗಳು ಪ್ರಸವಿಸಿದ ಆಶೌಚವು ನಿತ್ಯವಲ್ಲವೆಂದರೆ ಮಗಳು ತನ್ನ ಮನೆಯಲ್ಲಿ ಪ್ರಸವಿಸಿದರೆ ಮಾತ್ರ ತನಗೆ ಜನನಾಶೌಚ ಬರುತ್ತದೆ, ಅನ್ಯರ ಮನೆಯಲ್ಲಾದರೆ ಇಲ್ಲವಾದ್ದರಿಂದ ನಿತ್ಯವಲ್ಲ.) ಹೀಗೆಯೇ ಸ್ವಗೃಹದಲ್ಲಿ ಶ್ರೋತ್ರಿಯಾದಿಗಳ ಮರಣ ನಿಮಿತ್ತಾಶೌಚ ಮಧ್ಯದಲ್ಲಿ ಜ್ಞಾತ್ಯಘಕ್ಕೂ ನಿವೃತ್ತಿಯಿಲ್ಲವು.

## ॥ ರಜಸ್ವಲಾಶೌಚಂ-ತನ್ಮಧ್ಯೇ ಆಶೌಚಾಂತರ ಸಂಭವೇ ॥

ದಿವಾವಾ ರಾತ್ರೌವಾ ಮಲವದ್ವಾಸಸಸ್ತ್ರಿಯಃ ತದಾದಿ ತ್ರಿರಾತ್ರಮಾಶೌಚಂ । ರಜಸ್ವಲಾಯಾ ಆಶೌಚಾಂತರ ಸಂಭವೇ ಏಕರಾತ್ರ ತ್ರಿರಾತ್ರಾಶೌಚೇ ನಿವರ್ತೇತೇ । ನತು ದಶಾಹಾಶೌಚಂ । ಕಾಲತೋ ಗರೀಯಸ್ತ್ವಾತ್ ।

ಟೀ ॥ ಹಗಲಾಗಲೀ ರಾತ್ರಿಯಾಗಲೀ ಸ್ತ್ರೀಯು ರಜಸ್ವಲೆಯಾದರೆ ಅದ ಮೊದಲು ಮೂರುದಿನಾಶೌಚವು. ರಾತ್ರಿಯೆಂದರೆ ಹಿಂದೆ ವಿಭಾಗ ಮಾಡಿರುವಂತೆ ರಾತ್ರಿಯ ಮೂರನೇ ಭಾಗವೇ ಆಶೌಚಾನುಷ್ಠಾನಕ್ಕೆ ಆರಂಭಕಾಲವು. ಈ ರಜಸ್ವಲೆಯಾಗಿದ್ದ ಕಾಲದಲ್ಲಿ ದಶಾಹ ಜನನಮರಣಾಶೌಚವು ಪ್ರಾಪ್ತವಾದರೆ ತನ್ನ ಆಶೌಚವಾದ ರಜಸ್ವಲಾ ಸ್ನಾನದಲ್ಲಿ ಆಶೌಚಗಳಿಗೆ ನಿವೃತ್ತಿಯುಂಟೇ ಇಲ್ಲವೇ ಎಂದು ಸಂಶಯವು, ಶ್ಲೋ ॥ "ಸ್ವಕಾಲೇಸ್ವೈವ ಶುದ್ಧ್ಯೇರನ್ ಸೂತಿಕಾಜನಕೋಗ್ನಿದಃ" ಎಂಬ ವಚನದಲ್ಲಿ ಸೂತಿಕಾಶಬ್ದಗ್ರಹಣ ಮಾಡಿರುವುದರಿಂದ ಪ್ರಸವನಿಮಿತ್ತವಾದ ಆಶೌಚದಲ್ಲಿ ಸೂತಕಿಗೆ ತನ್ನ ಆಶೌಚವು ಪ್ರಬಲವೇ ಹೊರತು ರಜಸ್ವಲೆಗೆ ಅಲ್ಲ. 'ಶಾವಾದ್ದ್ವಿಗುಣಮಾರ್ತವಂ' ಎಂಬ ವಚನದಿಂದ ರಜಸ್ವಲೆಗೆ ತನ್ನ ಆಶೌಚವು ಪ್ರಬಲವಾದಾಗ್ಯೂ ದಶಾಹ ಜನನಮರಣಾಶೌಚಗಳಿಗೆ ಕಾಲತೋಗರೀಯಸ್ತ್ವವಿರುವುದರಿಂದ ರಜಸ್ವಲಾ ಸ್ನಾನಾನಂತರ ಮಿಕ್ಕ ಜನನಮರಣಾಶೌಚವನ್ನು ಅನುಷ್ಠಾನ ಮಾಡಬೇಕು, ಅಧಿಕಕಾಲವಿಲ್ಲದ್ದರಿಂದ ತ್ರಿರಾತ್ರೈಕರಾತ್ರಾಶೌಚಕ್ಕೆ ನಿವೃತ್ತಿಯುಂಟು, ವೃದ್ಧಾಚಾರವೂ ಇದೇ ರೀತಿ ಇದೆ.

## ॥ ತ್ರಿರಾತ್ರಾಶೌಚೇ ದೇಶಾಂತರೇ ಶ್ರವಣೇ ॥

ಸರ್ವತ್ರಿರಾತ್ರಾಶೌಚಸ್ಯ ದೇಶಾಂತರೇ ತ್ರಿರಾತ್ರಾಂತಃ ಮರಣಶ್ರವಣೇ ಪಕ್ಷಿಣೀ । ದೇಶಾಂತರಲಕ್ಷಣಂ ಬಹುಧಾ ಭಿನ್ನಂ । ಮುಖ್ಯಪಕ್ಷಸ್ತು, ಯತ್ರ

ಸರ್ವವರ್ಣಾನಾಂ ಭಾಷಾಭೇದಃ ತದೇವ ದೇಶಾಂತರಂ | ಮಹಾನದೀ ಮಹಾ ಪರ್ವತ ವ್ಯವಧಾನೇ ದೇಶಾಂತರಂ ; ತ್ರಿಂಶದ್ಯೋಜನ ವ್ಯವಧಾನೇ ದೇಶಾಂತರ ಮಿತಿಚ ಕೇಷಾಂಚಿನ್ಮತಂ | ದೇಶಭೇದಲಕ್ಷಣಂ :—

ಶ್ಲೋ || ಭಾಷಾಭೇದೋ ಮಹಾನದ್ಯಾ ವ್ಯವಧಾನಮಥಾದ್ರಿಣಾ |
ತ್ರಿಂಶದ್ಯೋಜನ ದೂರಂವಾ ಪ್ರತ್ಯೇಕಂ ದೇಶಭೇದಕಾಃ ||

ಇತಿ ಪ್ರಾಚೀನಷಡಶೀತೌ—

ಟೀ || ಎಲ್ಲಾ ತ್ರಿರಾತ್ರಾಶೌಚಗಳಿಗೂ ದೇಶಾಂತರದಲ್ಲಿ ಮೂರು ದಿನಗಳೊಳಗೆ ಪಕ್ಷಿಣಿಯು. ದೇಶಾಂತರವೆಂದರೆ ಒಂದು ದೇಶಕ್ಕಿಂತಲೂ ಇನ್ನೊಂದು ದೇಶದಲ್ಲಿ ಸರ್ವವರ್ಣದವರೂ ಯಾವ ಒಂದೇ ಭಾಷೆಯನ್ನು ಮಾತಾಡುತ್ತಾರೋ ಅದರ ವ್ಯತ್ಯಾಸವೇ ದೇಶಾಂತರಲಕ್ಷಣವು ಎಂದು ಅನೇಕರ ಮತವು. ಮೂವತ್ತುಗಾವುದ ದೂರವೆಂದು ಕೆಲವರು. ಮಹಾನದೀ ಪರ್ವತಾಂತರವೆಂದು ಕೆಲವರ ಮತವು.

## || ಅತಿಕ್ರಾಂತ ತ್ರಿರಾತ್ರಾದಿವಿಷಯೇ ||

ತ್ರಿರಾತ್ರಾನಂತರಂ ದಶಾಹಮಧ್ಯೇ ಪರೋಕ್ಷೇ ಮೃತಿಶ್ರವಣೇ ದಿನಮಾತ್ರಂ | ದಿನಾಶೌಚಸ್ಯ ಪರೋಕ್ಷೇ ಸ್ನಾನಮಾತ್ರಂ | ಪಕ್ಷಿಣ್ಯಾಶೌಚಿನಾಂ ತದತೀತಕಾಲೇ ಶ್ರವಣೇ ಏಕಕಾಲಃ | ದಿವಾಶ್ರವಣೇ ದಿವಾಮಾತ್ರಂ | ರಾತ್ರಿ ಶ್ರವಣೇ ರಾತ್ರಿಮಾತ್ರಂ | ಇತಿ ವೈದಿಕಸಾರ್ವಭೌಮ ಮತಂ ಅದ್ಯಾಪಿ ಶ್ರೀ ವೈಷ್ಣವೈ ರನುಷ್ಠೀಯ್ಯತೇ | ಕೈಶ್ಚಿದ್ದ್ರಾವಿಡೈಃ ಕರ್ನಾಟಕೈಶ್ಚ ವೈದ್ಯನಾಥ ಮತಾನುಸಾರಿಭಿಃ ಅತಿಕ್ರಾಂತಸ್ಯ ತ್ರಿರಾತ್ರಾದ್ಯಾಶೌಚಸ್ಯ ಶ್ರವಣೇ ಸ್ನಾನಮಾತ್ರಮನುಷ್ಠೀಯ್ಯತೇ.

ಟೀ || ತ್ರಿರಾತ್ರಾಶೌಚಿಗಳಿಗೆ ತ್ರಿದಿನಾತ್ಪರ ದಶಾಹಮಧ್ಯೆ ಶ್ರವಣದಲ್ಲಿ ಒಂದು ದಿನವು. ಪಕ್ಷಿಣ್ಯಾಶೌಚಿಗಳಿಗೆ ಪಕ್ಷಿಣೀಕಾಲದ ಮೇಲೆ ದಶಾಹಾತ್ಪೂರ್ವ ಶ್ರವಣದಲ್ಲಿ ಹಗಲು ಕೇಳಿದರೆ ಒಂದು ಹಗಲು. ರಾತ್ರಿ ಕೇಳಿದರೆ ಒಂದು ರಾತ್ರಿ ಎಂಬ ಒಂದು ಕಾಲವು. ದಿನಾಶೌಚಿಗಳಿಗೆ ದಿನಾತಿಕ್ರಮವಾದರೆ ಸ್ನಾನ ಮಾತ್ರವು ಎಂದು ತತಕಕಾರರ ಮತವು. ಇದು ಶ್ರೀವೈಷ್ಣವರಲ್ಲೂ ಕೆಲವು ದ್ರಾವಿಡ ಕರ್ನಾಟಕರಲ್ಲೂ ಅನಾದಿಯಾಗಿ ಆಚಾರವಿದೆ. ವೈದ್ಯನಾಥರ ಪಕ್ಷ

ದಲ್ಲಿ ತ್ರಿರಾತ್ರ ಪಕ್ಷಿಣೀ ದಿನಾಶೌಚಿಗಳಿಗೆ ತತ್ತತ್ಕಾಲದೊಳಗೆ ಶ್ರುತವಾದರೆ ತತ್ಕಾಲಪರ್ಯಂತ ಆಶೌಚವು. ತತ್ಕಾಲ ಮೀರಿದರೆ ಸ್ನಾನಮಾತ್ರವು. ಈ ಆಚಾರವೂ ಅನೇಕರಿಂದ ಅನುಷ್ಠಿಸಲ್ಪಡುತ್ತಲಿದೆ.

## ಇತಿ ತ್ರಿರಾತ್ರಾಶೌಚ ನಿರ್ಣಯಃ

## ॥ ಸ್ತ್ರೀಣಾಂ ಪಕ್ಷಿಣ್ಯಾಶೌಚಂ ॥

ಊಢಾನಾಂ ಸ್ತ್ರೀಣಾಂ—ಮಾತಾಮಹ ತತ್ಪತ್ನ್ಯೋಃ—ಮಾತುಳ ತತ್ಪತ್ನ್ಯೋಃ—ತತ್ಪುತ್ರೀಪುತ್ರಯೋಃ—ಮಾತೃಷ್ವಸೃ—ತತ್ಪುತ್ರೀಪುತ್ರಯೋಃ ಪಿತೃಷ್ವಸೃ— ತತ್ಪುತ್ರೀಪುತ್ರಯೋಃ—ಪಿತೃವ್ಯಸ್ಯ— ತತ್ಪುತ್ರೀಪುತ್ರಯೋಃ— ಸ್ವಸೃ—ತತ್ಪುತ್ರೀಪುತ್ರಯೋಃ— ಭ್ರಾತೃಪುತ್ರೀಪುತ್ರಯೋಃ—ಪೌತ್ರ್ಯಾಃ— ದೌಹಿತ್ರ್ಯಾಃ—ಪಿತಾಮಹ ಪಿತಾಮಹ್ಯೋಃ—ಮೃತೌ ಪಕ್ಷಿಣೀ॥ ತದ್ವಿಷಯೇ ಸ್ಪಷ್ಟಾರ್ಥವಚನಾನಿ ಮಯಾಽಚ ಕಾನಿಚಿಲ್ಲಿಖ್ಯಂತೇ—

ಶ್ಲೋ ॥ ಮಾತೃಷ್ವಸಾ ಮಾತುಳಶ್ಚ ಸ್ವಸಾ ಭ್ರಾತಾ ಪಿತೃಷ್ವಸಾ ।
ಪಂಚ ತತ್ತತ್ಸುತಾಃ ಪುತ್ರಾ ದಶ—ಪೌತ್ರೀ ಪಿತಾಮಹಃ ॥
ಮಾತಾಮಹಶ್ಚ ದೌಹಿತ್ರೀ ಪಿತೃವ್ಯ ಸ್ತತ್ಸುತಾತ್ಮಜೌ ।
ದ್ವಾವಿಂಶತಿ ಜನಾಶ್ಚೈತೇ ಪರೋಕ್ಷೇ ದುಹಿತಾ ಪಿತಾ ।
ದೌಹಿತ್ರಶ್ಚ ತ್ರಯಶ್ಚೈತೇ ತತ್ತತ್ಪತ್ನ್ಯ ಸ್ತ್ರಯೋದಶ ॥
ಸ್ತ್ರೀಮೃತೌ ಪಕ್ಷಿಣೀಭಾಜೋ ಹ್ಯಷ್ಟತ್ರಿಂಶದಿತಿ ಸ್ಥಿತಿಃ ।

ಅಸ್ಯಾರ್ಥಃ— ಪುರಾ ಉಕ್ತವಚನೇಷು ಕಸ್ಯಾಶ್ಚಿತ್ ಗೌರೀನಾಮ್ನ್ಯಾಃ ಸ್ತ್ರಿಯೋಮೃತೌ ಯೇಷಾಂ ಪುಂಸಾಂ ಪಕ್ಷಿಣ್ಯಾಶೌಚಮುಕ್ತಂ ತತ್ತತ್ಪತ್ನೀನಾ ಮಪಿ "ಪತ್ಯುರ್ಯದ್ಯದಘಂ ಪತ್ನ್ಯಾಃ" ಇತಿ ನ್ಯಾಯೇನ ತ್ರಯೋದಶ ಸ್ತ್ರೀಣಾಂ ಗ್ರಂಥೋಕ್ತ ದ್ವಾವಿಂಶತಿಜನಾನಾಂ, ಪರೋಕ್ಷೇ ಪಿತೃ ಪುತ್ರ್ಯೋಃ ಪರೋಕ್ಷೇ ದೌಹಿತ್ರಸ್ಯಚ ಏತೇಷಾಂ ತ್ರಯಾಣಾಂ ಆಹತ್ಯ ಅಷ್ಟತ್ರಿಂಶಜ್ಜನಾನಾಂ ಪಕ್ಷಿಣ್ಯಾಶೌಚಂ ಜ್ಞೇಯಂ—ಮಾತೃಷ್ವಸ್ರೀಯಾದಿ ಪತ್ನೀಗ್ರಹಣಂ ತತ್ತದ್ಭರ್ತರಿ ಮೃತೇ ತದೂರ್ಧ್ವಮಪಿ ತಾಸಾಂ ಪಕ್ಷಿಣೀಪ್ರಾಪ್ತ್ಯರ್ಥಂ । ಕಿಂಚ ।

ಶ್ಲೋ || ಮಾತೃತಃ ಪಿತೃತೋ ಯೇಷು ವಿಹಿತಾ ಪುಂಸ್ಸುಪಕ್ಷಿಣೀ |
ನಪಕ್ಷಿಣೀಮೃತೌ ಸಾಸ್ಯಾತ್ ಸ್ನಾನಮಾತ್ರಂ ವಿಧೀಯ್ಯತೇ ||

ಇತ್ಯುಕ್ತ್ಯಾ ಮಾತೃಷ್ವಸೇಯಾದಿ ಪತ್ನೀಮರಣೇ ಗೌರ್ಯಾಃ ನಪಕ್ಷಿಣೀ | ಕಿಂತು | ಸ್ನಾನಮೇವ | ಏತಸ್ಯ ವಿವರಣಂ—

ಪಿತೃಷ್ವಸೇಯಪತ್ನೀ | ೧ | ಸ್ವಸ್ಯಪುತ್ರಪತ್ನೀ | ೨ | ಮಾತುಳಪುತ್ರ ಪತ್ನೀ | ೩ | ಭ್ರಾತೃಪುತ್ರಪತ್ನೀ | ೪ | ಪಿತೃವ್ಯಪುತ್ರಪತ್ನೀ | ೫ | ದೌಹಿತ್ರ ಪತ್ನೀ | ೬ | ಏತಾಸಾಂ ಷಣ್ಣಾಂ ಮೃತೌ ಗೌರ್ಯ್ಯಾಸ್ಸ್ನಾನಮಾತ್ರಂ |

ಮಾತುಳಪತ್ನೀ | ೧ | ಭ್ರಾತೃಪತ್ನೀ | ೨ | ಪಿತೃವ್ಯಪತ್ನೀ | ೩ | ಪಿತಾಮಹೀ | ೪ | ಮಾತಾಮಹೀ | ೫ | ಏತಾಸಾಂ ಪಂಚಾನಾಂ ಮೃತೌ ವಚನಾಂತರೇಣ ಪಕ್ಷಿಣೀವಿಧಾನಾತ್ ತಾಸಾಂ ಮರಣೇ ಗೌರ್ಯಾಃ ಪಕ್ಷಿಣೀ |

ಮಾತುಃ ಪುತ್ರ್ಯಾಃ ಸ್ವಸುಶ್ಚ ಮೃತೌ ವಚನಾಂತರೇಷು ಪರೋಕ್ಷ ಪ್ರತ್ಯಕ್ಷ ಭೇದೇನ ಪಕ್ಷಿಣೀ ತ್ರಿರಾತ್ರ ವಿಧಾನಾತ್ | ತ್ರಿರಾತ್ರಾನುಷ್ಠಾನಸ್ಯ ಅವಿಗೀತ ಶಿಷ್ಟಾಚಾರ ಪ್ರಾಪ್ತತ್ವಾಚ್ಚ ತಾಸಾಂ ಮೃತೌ ತ್ರ್ಯಹಮೇವ | ಪರೋಕ್ಷೇ ಪಕ್ಷಿಣೀತ್ಯಂಗೀಕಾರೇ ಅಷ್ಟತ್ರಿಂಶಜ್ಜನಾ ಭವಿಷ್ಯಂತಿ| ಅನ್ಯಥಾ ಪಂಚತ್ರಿಂಶಜ್ಜನಾಃ | ವೈದಿಕಸಾರ್ವಭೌಮ ಮತೇ ಮಾತುಳಪತ್ನೀ ಮರಣೇ ಸ್ತ್ರಿಯೋ ನಾಶೌಚಮುಕ್ತಂ | ತಥಾಪಿ ವೈದ್ಯನಾಥ ಮತಾತ್ ಅವಿಗೀತ ಶಿಷ್ಟಾಚಾರಾಚ್ಚ ಸರ್ವತ್ರ ಪಕ್ಷಿಣ್ಯಾಶೌಚ ಮನುಷ್ಠೀಯ್ಯತೇ |

ಟೀ || ಗೌರೀ ಎಂಬ ಒಬ್ಬ ಸ್ತ್ರೀಯ ಮೃತಿಯಲ್ಲಿ ಈ ಕೆಳಗೆ ವಿವರಿಸಲ್ಪಡ ತಕ್ಕ ಮೂವತ್ತೆಂಟು ಜನಗಳಿಗೆ ಪಕ್ಷಿಣ್ಯಾಶೌಚವು| ಯಾರಿಗೆಂದರೆ:—

೧ ತಾಯಿಯ ತಂದೆ.
೨ ತಾಯಿಯ ತಾಯಿ.
೩ ಸೋದರಮಾವ.
೪ ಇವನ ಹೆಂಡತಿ.
೫ ಇವನ ಮಗ.
೬ ಇವನ ಮಗಳು.
೭ ತಾಯಿಯ ಅಕ್ಕತಂಗಿಯರು.
೮ ಅವರ ಮಗ.
೯ ಅವರ ಮಗಳು.
೧೦ ಸೋದರತ್ತೆ.
೧೧ ಅವಳ ಮಗ.
೧೨ ಅವಳ ಮಗಳು.
೧೩ ತಂದೆಯಕೂಡ ಹುಟ್ಟಿದ ಅಣ್ಣತಮ್ಮಂದಿರು

೧೪ ಅವರ ಮಗ,
೧೫ ಅವರ ಮಗಳು.
೧೬ ತನ್ನ ಅಕ್ಕತಂಗಿಯರು.
೧೭ ಅವರ ಮಗ.
೧೮ ಅವರ ಮಗಳು.
೧೯ ತನ್ನ ಅಣ್ಣತಮ್ಮಂದಿರು,
೨೦ ಅವರ ಮಗ,
೨೧ ಅವರ ಮಗಳು
೨೨ ತನ್ನ ಮಗನ ಮಗಳು.
೨೩ ಮಗಳ ಮಗಳು.
೨೪ ತಂದೆಯ ತಂದೆ.
೨೫ ತಂದೆಯ ತಾಯಿ,
೨೬ ಸೋದರಮಾವನ ಮಗನ ಹೆಂಡತಿ.
೨೭ ಸೋದರತ್ತೆಯ ಮಗನಹೆಂಡತಿ.
೨೮ ತಾಯಿಯ ಅಕ್ಕತಂಗಿಯರ ಮಗನ ಹೆಂಡತಿ.
೨೯ ತಂದೆಯ ಅಣ್ಣತಮ್ಮಂದಿರ ಮಗನ ಹೆಂಡತಿ.
೩೦ ಅಕ್ಕತಂಗಿಯರ ಮಗನ ಹೆಂಡತಿ.
೩೧ ಅಣ್ಣತಮ್ಮಂದಿರ ಮಗನ ಹೆಂಡತಿ.
೩೨ ಮಗಳ ಮಗನ ಹೆಂಡತಿ.
೩೩ ಅಣ್ಣತಮ್ಮಂದಿರ ಹೆಂಡತಿ.
೩೪ ತಂದೆಯ ಅಣ್ಣತಮ್ಮಂದಿರ ಹೆಂಡತಿ.
೩೫ ಪರೋಕ್ಷದಲ್ಲಿ ತಾಯಿ.
೩೬ ಪರೋಕ್ಷದಲ್ಲಿ ತಂದೆ.
೩೭ ಪರೋಕ್ಷದಲ್ಲಿ ಮಗಳು.
೩೮ ಪರೋಕ್ಷದಲ್ಲಿ ಮಗಳ ಮಗ.

ಸೋದರತ್ತೆಯ ಮಗನ ಹೆಂಡತಿ | ೧ | ಅಕ್ಕ ತಂಗಿ ಇವರ ಮಗನ ಹೆಂಡತಿ | ೨ | ಸೋದರಮಾವನ ಮಗನ ಹೆಂಡತಿ | ೩ | ಅಣ್ಣತಮ್ಮಂದಿರ ಮಗನ ಹೆಂಡತಿ | ೪ | ಚಿಕ್ಕಪ್ಪ ದೊಡ್ಡಪ್ಪನ ಮಗನ ಹೆಂಡತಿ | ೫ | ಮಗಳ ಮಗನ ಹೆಂಡತಿ | ೬ | ಈ ಆರು ಜನ ಹೊರತು ಬಾಕಿಯವರ ಮೃತಿಯಲ್ಲೂ ಗಂಡಿಗೆ ಪಕ್ಷಿಣ್ಯಾಶೌಚವು. ಈ ಆರು ಜನರ ಮೃತಿಯಲ್ಲಿ ಗಂಡಿಗೆ ಸ್ನಾನ ಮಾತ್ರವು. ಪ್ರತ್ಯಕ್ಷದಲ್ಲಿ ತಾಯಿ, ತಂದೆ, ಅಣ್ಣತಮ್ಮಂದಿರು, ಉಪನೀತ ದೌಹಿತ್ರ, ಪುತ್ರೀ ಇವರುಗಳ ಮೃತಿಯಲ್ಲಿ ಗಂಡಿಗೆ ತ್ರಿರಾತ್ರವು.

## ॥ ಪುರುಷವಿಷಯೇ ಪಕ್ಷಿಣ್ಯಾಶೌಚಂ ॥

ಪುರುಷಸ್ಯ ಮೃತೌ ಮಾತುಳ ಪುತ್ರೀಪುತ್ರಯೋಃ, ಮಾತೃಷ್ವಸೃ ಪುತ್ರೀಪುತ್ರಯೋಃ, ಪಿತೃಷ್ವಸೃ ಪುತ್ರೀಪುತ್ರಯೋಃ, ಸ್ವಸೃಪುತ್ರ್ಯಾಃ, ಭ್ರಾತೃ ಪುತ್ರ್ಯಾಃ, ಪಿತೃವ್ಯಪುತ್ರ್ಯಾಃ, ದೌಹಿತ್ರ್ಯಾಃ, ಪೌತ್ರ್ಯಾಶ್ಚ ಪಕ್ಷಿಣೀ ॥ ತಸ್ಯ

ದೇವದತ್ತಸ್ಯ ಮೃತೌ ತಸ್ಯ ಮಾತೃಷ್ವಸುಃ |೧| ತತ್ಪುತ್ರ್ಯಾಃ |೨| ತತ್ಪುತ್ರಸ್ಯ |೩| ತತ್ಪುತ್ರ್ಯಾಃ |೪| ಪಿತೃಷ್ವಸುಃ |೫| ತತ್ಪುತ್ರ್ಯಾಃ |೬| ತತ್ಪುತ್ರಸ್ಯ |೭| ತತ್ಪುತ್ರ್ಯಾಃ |೮| ಪೌತ್ರ್ಯಾಃ |೯| ಭ್ರಾತೃಪುತ್ರ್ಯಾಃ |೧೦| ಪರೋಕ್ಷೇ ಭಗಿನ್ಯಾಃ |೧೧| ಭಗಿನೀಪುತ್ರ್ಯಾಃ |೧೨| ಪಿತೃಷ್ವಸೃಪುತ್ರ್ಯಾಃ |೧೩| ದೌಹಿತ್ರ್ಯಾಃ |೧೪| ಮಾತುಲಪುತ್ರ್ಯಾಃ |೧೫| ಮಾತುಲಪುತ್ರಸ್ಯ |೧೬| ತತ್ಪುತ್ರ್ಯಾಃ |೧೭| ಪರೋಕ್ಷೇ ಪುತ್ರ್ಯಾಃ |೧೮| ಪರೋಕ್ಷೇ ಭಗಿನೀಪುತ್ರಸ್ಯ |೧೯| ತತ್ಪುತ್ರ್ಯಾಃ |೨೦| ಪರೋಕ್ಷೇ ದೌಹಿತ್ರಸ್ಯ |೨೧| ತತ್ಪುತ್ರ್ಯಾಃ |೨೨| ಪರೋಕ್ಷೇ ಮಾತಾಮಹಸ್ಯ |೨೩| ಮಾತಾಮಹ್ಯಾಶ್ಚ |೨೪| ಏತೇಷಾಂ ಚತುರ್ವಿಂಶತಿಜನಾನಾಂ ಪಕ್ಷಿಣ್ಯಾಶೌಚಂ |

ಶ್ಲೋ || ಮಾತೃಕಃ ಪಿತೃತೋ ಯೋಷು ವಿಹಿತಾ ಪುಂಸ್ಸು ಪಕ್ಷಿಣೀ |
ಸತತ್ಪುತ್ರೀಮೃತೌ ಸಾಕ್ಷಾತ್ ಸ್ನಾನಮಾತ್ರಂ ವಿಧೀಯತ ಇತಿ ||

ಪ್ರಾಗುಕ್ತರೀತ್ಯಾ ಮಾತೃಷ್ವಸೃಪುತ್ರಪತ್ನ್ಯಾಃ |೧| ಪಿತೃಷ್ವಸೃಪುತ್ರಪತ್ನ್ಯಾಃ |೨| ತತ್ಸ್ವಸೃಪುತ್ರಪತ್ನ್ಯಾಃ |೩| ದೌಹಿತ್ರಪತ್ನ್ಯಾಃ |೪| ಮಾತುಲಪುತ್ರಪತ್ನ್ಯಾಃ |೫| ಏತಾಸಾಂ ಪಂಚವಿಧಸ್ತ್ರೀಣಾಂ ಮೃತೌ ತತ್ಪ್ರತಿಯೋಗಿನೋ ದೇವದತ್ತಸ್ಯ ಸಪಕ್ಷಿಣೀ | ಕಿಂತು ಸ್ನಾನಮಾತ್ರಂ | ಇತಿ ಶತಕಕಾರಪಕ್ಷಃ—ವೈದ್ಯನಾಥಪಕ್ಷೇ ಸ್ತ್ರೀವ್ಯಕ್ತ್ಯಂತರರೀತ್ಯಾ—ಭಗಿನ್ಯಾಃ |೧| ಭಗಿನೀಪುತ್ರಸ್ಯ |೨| ತತ್ಪುತ್ರ್ಯಾಃ |೩| ಮಾತಾಮಹಸ್ಯ |೪| ಮಾತಾಮಹ್ಯಾಃ |೫| ಮಾತೃಷ್ವಸುಃ |೬| ಪಿತೃಷ್ವಸುಃ |೭| ಮಾತುಲಪತ್ನ್ಯಾಃ |೮| ಏಷಾಂ ಅಷ್ಟಜನಾನಾಂ ಮೃತೌ ದೇವದತ್ತಸ್ಯ ತ್ರಿರಾತ್ರಾಶೌಚಮೇವೇತಿ | ಇದಾನೀಂ ತಥೈವ ಪ್ರಾಯಶೋಽನುಷ್ಠೀಯತೇ | ಪ್ರತ್ಯಕ್ಷೇ ಏತೇಷಾಮಷ್ಟಜನಾನಾಂ ತ್ರಿರಾತ್ರಂ | ಪರೋಕ್ಷೇ ಪಕ್ಷಿಣೀತಿ ಕೇಚಿತ್ | ಯಥಾ ಸ್ವಕುಲಾಚಾರಮಿಹ ವ್ಯವಸ್ಥಾ ದ್ರಷ್ಟವ್ಯಾ | ದಿನದ್ವಯ ಯುಕ್ತಾ ರಾತ್ರಿಃ-ರಾತ್ರಿದ್ವಯ ಯುಕ್ತಮಹರ್ವಾ ಪಕ್ಷಿಣೀ ಶಬ್ದೇನೋಚ್ಯತೇ | "ಆಗಾಮಿವರ್ತಮಾನಾಹರ್ಯುಕ್ತಾಯಾಂ ನಿಶಿ ಪಕ್ಷಿಣೀ" ತಿ ಸಾರ್ಧೈಕದಿನಂ ಪಕ್ಷಿಣೀಕಾಲ ಇತಿ ಸ್ಮೃತಿಮುಕ್ತಾಫಲೇ—ದೀಪಿಕಾಯಾಂ—

ಶ್ಲೋ || ಪಕ್ಷಾಭ್ಯಾಮುಭಯಾಹೋಭ್ಯಾಂ ಯುಕ್ತಾ ಸಾ ಪಕ್ಷಿಣೀ ನಿಶಾ |
ಉಪಲಕ್ಷಣಮೇತತ್ತು ತಥಾ ಕಾಲತ್ರಯಸ್ಯ ಚ | ಇತಿ |

ಅಭಿನವಷಡಶೀತ್ಯಾದೌ ಪಕ್ಷಿಣೀ ಶಬ್ದಸ್ತು ದಿವಾನಿಮಿತ್ತೆ ಪ್ರಾಪ್ತಿದ್ವಾಭ್ಯಾಮಹೋಭ್ಯಾಂ ಯುಕ್ತಾ ರಾತ್ರಿಃ ಪಕ್ಷಿಣೀ— ರಾತ್ರೌ ನಿಮಿತ್ತೇ ಪ್ರಾಪ್ತೇ ರಾತ್ರಿದ್ವಯ ಯುಕ್ತಮಹಶ್ಚ ಪಕ್ಷಿಣೀತಿ— ಏತೇನ ಸೂರ್ಯೋದಯಾತ್ಪೂರ್ವಂ ರಾತ್ರೌ ಮರಣೇ ಸಾಶಾತ್ರಿರೇಕಾ | ಪರದಿನಮೇಕಮಹಃ | ಪರದಿನರಾತ್ರಿಃ ಮಿಳಿತ್ವಾಪಕ್ಷಿಣೀ ಸ್ಯಾತ್ | ಸೂರ್ಯಾಸ್ತಾತ್ಪೂರ್ವಂ ದಿವಾಮರಣೇ, ತದೇಕಮಹಃ ತದ್ದಿನರಾತ್ರಿಃ ಪರೇದ್ಯುರಹರ್ವಾತ್ರಂ ಮಿಳಿತ್ವಾ ಪಕ್ಷಿಣೀ ತ್ಯುಕ್ತಂ ಭವತಿ | ಏವಮೇವ ಸರ್ವತ್ರ ಶಿಷ್ಟಾಚಾರೋಽಪಿ ದೃಶ್ಯತೇ | ನವತಿಘಟಿಕಾತ್ಮಕ ಕಾಲಃ ಪಕ್ಷಿಣೀತಿ ಕೇಚಿತ್ | ತಸ್ಯ ನಿರ್ಮೂಲತ್ವಾತ್— ಪ್ರಾಯೇಣ ವ್ಯಭಿಚಾರಾತ್---ತಥಾ ಶಿಷ್ಟಾಚಾರಾಭಾವಾಚ್ಚ ನಾದರಣೀಯಂ |

ಟೀ || ಒಬ್ಬ ದೇವದತ್ತನೆಂಬವನ ಮೃತಿಯಲ್ಲಿ ಈ ಕೆಳಗೆ ವಿವರಿಸಲ್ಪಡುವ ೨೪ ಜನಗಳಿಗೆ ಪಕ್ಷಿಣ್ಯಾಶೌಚವು. ಯಾರಿಗೆಂದರೆ :—

| | |
|---|---|
| ೧ ತಾಯಿಯ ಅಕ್ಕತಂಗಿಯರು. | ೧೩ ತಂದೆಯ ಅಣ್ಣತಮ್ಮಂದಿರ ಮಗಳು. |
| ೨ ಇವರ ಮಗಳು, | ೧೪ ಮಗಳ ಮಗಳು. |
| ೩ ಇವರ ಮಗ. | ೧೫ ಸೋದರಮಾವನ ಮಗಳು. |
| ೪ ಇವರ ಮಗನ ಹೆಂಡತಿ. | ೧೬ ಸೋದರಮಾವನ ಮಗ. |
| ೫ ತಂದೆಯ ಅಕ್ಕತಂಗಿಯರು. | ೧೭ ಸೋದರಮಾವನ ಮಗನ ಹೆಂಡತಿ. |
| ೬ ಇವರ ಮಗಳು. | ೧೮ ಪರೋಕ್ಷದಲ್ಲಿ ಮಗಳು. |
| ೭ ಇವರ ಮಗ. | ೧೯ ಪರೋಕ್ಷದಲ್ಲಿ ಅಕ್ಕತಂಗಿಯರ ಮಗ. |
| ೮ ಇವರ ಮಗನ ಹೆಂಡತಿ | ೨೦ ಅಕ್ಕತಂಗಿಯರ ಮಗನ ಹೆಂಡತಿ. |
| ೯ ಮಗನ ಮಗಳು. | ೨೧ ಪರೋಕ್ಷದಲ್ಲಿ ಮಗಳ ಮಗ. |
| ೧೦ ಪರೋಕ್ಷದಲ್ಲಿ ಅಕ್ಕತಂಗಿಯರು | ೨೨ ಇವನ ಹೆಂಡತಿ. |
| ೧೧ ಅಕ್ಕತಂಗಿಯರ ಮಗಳು. | ೨೩ ಪರೋಕ್ಷದಲ್ಲಿ ತಾಯಿಯ ತಂದೆ. |
| ೧೨ ಅಣ್ಣತಮ್ಮಂದಿರ ಮಗಳು. | ೨೪ ಪರೋಕ್ಷದಲ್ಲಿ ತಾಯಿಯ ತಾಯಿ. |

ಈ ೨೪ ಜನಗಳಿಗೂ ಪಕ್ಷಿಣ್ಯಾಶೌಚವು. ಇವರುಗಳ ಮರಣದಲ್ಲೂ ದೇವದತ್ತನಿಗೆ ಪಕ್ಷಿಣಿಯೇ ಆಗಬೇಕು. ಆದರೆ ತಾಯಿಯ ಅಕ್ಕತಂಗಿಯರ ಮಗನ ಹೆಂಡತಿ | ೧ | ತಂದೆಯ ಅಕ್ಕತಂಗಿಯರ ಮಗನ ಹೆಂಡತಿ | ೨ | ತನ್ನ ಅಕ್ಕತಂಗಿಯರ ಮಗನ ಹೆಂಡತಿ | ೩ | ಮಗಳ ಮಗನ ಹೆಂಡತಿ | ೪ | ಸೋದರಮಾವನ ಮಗನ ಹೆಂಡತಿ | ೫ | ಈ ಐದು ಜನಗಳ ಮೃತಿಯಲ್ಲಿ ದೇವ

ದತ್ತನಿಗೆ ಪಕ್ಷಿಣ್ಯಾಶೌಚವಿಲ್ಲ. ಸ್ನಾನಮಾತ್ರವೇ. ಬಾಕಿ ಜನಗಳ ಪೈಕಿ ವೈದ್ಯನಾಥರ ಪಕ್ಷರೀತ್ಯಾ ಸ್ಮೃತ್ಯಂತರ ವಚನದಿಂದ, ತನ್ನ ಅಕ್ಕತಂಗಿಯರು | ೧ | ಅಕ್ಕತಂಗಿಯರ ಮಗ | ೨ | ತನ್ನ ಮಗಳು | ೩ | ತಾಯಿಯ ತಂದೆ | ೪ | ತಾಯಿಯ ತಾಯಿ | ೫ | ತಾಯಿಯ ಅಕ್ಕತಂಗಿಯರು | ೬ | ತಂದೆಯ ಅಕ್ಕತಂಗಿಯರು | ೭ | ಸೋದರಮಾವನ ಹೆಂಡತಿ | ೮ | ಈ ಎಂಟು ಜನಗಳ ಸಾನ್ನಿಧ್ಯ ಮರಣದಲ್ಲಿ ದೇವದತ್ತನಿಗೆ ಮೂರುದಿನಾಶೌಚವೆಂದು ಹೇಳಲ್ಪಟ್ಟಿದೆ. ಇದೇ ಈಗ ಎಲ್ಲರಲ್ಲಿಯೂ ಪ್ರಾಯಶಃ ಅನುಷ್ಠಾನದಲ್ಲಿದೆ. ಈ ಎಂಟು ಜನಗಳ ಪರೋಕ್ಷ ಮೃತಿಯಲ್ಲಿ ಪಕ್ಷಿಣ್ಯಾಶೌಚವೆಂದು ಕೆಲವರ ಮತ. ತನ್ನ ಕುಲಾಚಾರದಂತೆ ನಡೆಯಬೇಕು. ಎರಡು ಹಗಲಿನಿಂದ ಕೂಡಿದ ರಾತ್ರಿಯೂ, ಅಥವಾ ಎರಡು ರಾತ್ರಿಯಿಂದ ಕೂಡಿದ ಹಗಲೂ ಪಕ್ಷಿಣೀ ಶಬ್ದದಿಂದ ಹೇಳಲ್ಪಡುತ್ತದೆ. ತೊಂಭತ್ತು ಘಳಿಗೆಗೆ ಪಕ್ಷಣೀ ಎಂಬ ಮತವು ಸರಿಯಲ್ಲವು.

## || ಸ್ತ್ರೀಣಾಂ ವಿವಾಹಾನಂತರಂ ||

ಸ್ತ್ರೀಣಾಂ ವಿವಾಹಾನಂತರಂ, ಪುರುಷಾಣಾಮುಪನಯನಾನಂತರಂ ಮೃತೌ ತ್ರಿರಾತ್ರ ಪಕ್ಷಿಣ್ಯಾದ್ಯಾಶೌಚಂ ತತ್ಪ್ರತಿಯೋಗಿನಾಮಪಿ ವಿವಾಹೋಪನಯನಾದೂರ್ಧ್ವಮೇವ ಮೃತೌ ತ್ರಿರಾತ್ರ ಪಕ್ಷಿಣ್ಯಾದ್ಯಾಶೌಚ ಮನುಷ್ಠೇಯಂ | ತತ್ಪೂರ್ವಂ ಸ್ನಾನಮಾತ್ರಂ | ಪುರುಷಸ್ಯ ಯತ್ರಯತ್ರ ತ್ರಿರಾತ್ರ ಪಕ್ಷಿಣ್ಯಾದ್ಯಾಶೌಚಮುಕ್ತಂ ತತ್ಪತ್ನ್ಯಾಶ್ಚ ತತ್ರತತ್ರ ತದಾಶೌಚಂ ಸರ್ವಮನುಷ್ಠೇಯಂ | ಪತ್ನ್ಯಾಃ ತ್ರಿರಾತ್ರಾದ್ಯಾಶೌಚಂ ಭರ್ತುರ್ನಸ್ಯಾತ್ | ಕಿಂತು ಸ್ನಾನಮಾತ್ರಂ | ಮಾತೃಷ್ವಸ್ರಾದಿ ಭರ್ತುರ್ಮರಣೇ ಸ್ನಾನಮಾತ್ರಂ | ದೌಹಿತ್ರ ಭಾಗಿನೇಯಾದಿ ಪತ್ನೀಮರಣೇಪಿ ಸ್ನಾನಂ | ಪಕ್ಷಿಣ್ಯಾಶೌಚಿನಸ್ತು ಪರೋಕ್ಷ ಮರಣಶ್ರುತೌ ಏಕರಾತ್ರಮಾಶೌಚಂ | ಪಕ್ಷಿಣ್ಯತೀತೇ ದಶಾಹಮಧ್ಯೇ ಶ್ರವಣೇ ಏಕಕಾಲಃ | ದಿವಾಶ್ರುತೌ ದಿವಾ ; ರಾತ್ರಿ ಶ್ರುತೌ ರಾತ್ರಿಮಾತ್ರಂ | ದಶಾಹಾತ್ಪರಂ ಶ್ರವಣೇ ಸ್ನಾನಮಿತಿ ಶತಕಕಾರಪಕ್ಷಃ | ತ್ರಿರಾತ್ರ ಪಕ್ಷಿಣ್ಯಾದ್ಯಾಶೌಚಾನಾಂ ತತ್ತತ್ಕಾಲಾತಿಕ್ರಮೇ ಸ್ನಾನಮೇವೇತಿ ಸ್ಮೃತಿಮುಕ್ತಾಫಲ ಕರ್ತ್ರಾದ್ಯಭಿಪ್ರಾಯಃ | ಯಥಾ ಸ್ವಕುಲಶಿಷ್ಟಾಚಾರಮಿಹ ವ್ಯವಸ್ಥಾ ದ್ರಷ್ಟವ್ಯಾ | ವೈದಿಕಸಾರ್ವಭೌಮ್ಯೈಸ್ತು ಮಾತುಳಾನೀ ಮೃತೌ ಸ್ತ್ರೀಣಾಮಾಶೌಚಂ ನಾಸ್ತಿ|

ಸ್ವಭಗಿನೀ ಪಿತೃಷ್ವಸೃ ಭ್ರಾತೃ ತತ್ಪುತ್ರ ಮೃತೌ ಪರಸ್ಪರಂ ಪಕ್ಷಿಣ್ಯಾಶೌಚಮಿತಿ ಚೋಕ್ತಂ। ಏತಾಸಾಂ ಮೃತೌ ಸ್ಮೃತ್ಯಂತರೇ ತ್ರಿರಾತ್ರ, ಪಕ್ಷಿಣ್ಯಾದ್ಯಾಶೌಚ ವಿಧಾನಾದವಿಗೀತ ಶಿಷ್ಟಾಚಾರಾಚ್ಚ ತ್ರಿರಾತ್ರ, ಪಕ್ಷಿಣ್ಯಾದ್ಯಾಶೌಚ ಮುಕ್ತಂ। ತಥಾಹಿ। ಮಾತಾಮಹೀ, ಮಾತುಳಾನೀ, ಭಗಿನೀನಾಂ ಮೃತೌ ಸ್ತ್ರಿಯಾಃ ಪಕ್ಷಿಣೀ ; ಪುರುಷಾಣಾಂತು ತ್ರಿರಾತ್ರಾಶೌಚಮಿಷ್ಯತೇ ಇತಿ।

ಶ್ಲೋ॥ ಪಿತೃಷ್ವಸಾಚ ಸ್ವಸೃ ತತ್ಸೂನುಃ ಶುದ್ಧ್ಯಾಸ್ಸ್ಯುರುದ್ವಾಹಕತ ಸ್ತ್ರಿರಾತ್ರಾದಿತಿ ಸ್ಮರಣಾತ್ ॥

ಟೀ॥ ಸ್ತ್ರೀಯರಿಗೆ ವಿವಾಹಾನಂತರದಲ್ಲೂ, ಪುರುಷರಿಗೆ ಉಪನಯನಾನಂತರದಲ್ಲೂ ಮೃತಿಯಾದರೆ ತತ್ಪ್ರತಿಯೋಗಿಗಳಿಗೆ ತ್ರಿರಾತ್ರ ಪಕ್ಷಿಣ್ಯಾದ್ಯಾಶೌಚವು. ತತ್ಪ್ರತಿಯೋಗಿಗಳಿಗೂ ವಿವಾಹ, ಉಪನಯನಾನಂತರ ಮೃತಿಯಾದರೆ ತದನುಯೋಗಿಗಳಿಗೂ ತ್ರಿರಾತ್ರ ಪಕ್ಷಿಣ್ಯಾದ್ಯಾಶೌಚವುಂಟು. ತತ್ಪೂರ್ವದಲ್ಲಿ ಸ್ನಾನಮಾತ್ರವು. ಪುರುಷನಿಗೆ ಎಲ್ಲೆಲ್ಲಿ ತ್ರಿರಾತ್ರ, ಪಕ್ಷಿಣ್ಯಾದ್ಯಾಶೌಚವು ಉಕ್ತವಾಗಿದೆಯೋ ಅವರವರ ಪತ್ನಿಯರುಗಳಿಗೂ ಪತಿಗೆಬಂದ ಆಶೌಚವುಂಟು. ಪತ್ನಿಯರುಗಳಿಗೆ ಬಂದ ಆಯಾಯ ತ್ರಿರಾತ್ರ ಪಕ್ಷಿಣ್ಯಾದ್ಯಾಶೌಚವು ಪತಿಗೆ ಇಲ್ಲ. ಆದರೆ ಸ್ನಾನಮಾತ್ರ ವುಂಟು. ತಾಯಿಯ ಅಕ್ಕತಂಗಿಯರ ಗಂಡನ ಮೃತಿಯಲ್ಲಿಯೂ. ದೌಹಿತ್ರ, ಭಾಗಿನೇಯರ ಪತ್ನೀ ಮೃತಿಯಲ್ಲೂ ಸ್ನಾನಮಾತ್ರವು. ಪಕ್ಷಿಣ್ಯಾಶೌಚಿಗಳಿಗೆ ಪರೋಕ್ಷಮೃತಿ ಶ್ರವಣದಲ್ಲಿ ಒಂದುದಿನಾಶೌಚವು. ಪಕ್ಷಿಣೀಕಾಲ ಮೀರಿದಮೇಲೆ ದಶಾಹಮಧ್ಯೇ ಶ್ರವಣದಲ್ಲಿ ಒಂದು ಕಾಲಾಶೌಚವು. ಹಗಲು ಶ್ರುತವಾದರೆ ಹಗಲು ಮಾತ್ರ. ರಾತ್ರಿ ಶ್ರುತವಾದರೆ ರಾತ್ರಿ ಮಾತ್ರ. ದಶಾಹಾತ್ಪರದಲ್ಲಿ ಶ್ರವಣವಾದರೆ ಸ್ನಾನಮಾತ್ರವೆಂದು ಶತಕಕಾರರ ಪಕ್ಷವು. ತ್ರಿರಾತ್ರ ಪಕ್ಷಿಣ್ಯಾದ್ಯಾಶೌಚಿಗಳಿಗೆ ತತ್ತತ್ಕಾಲಾತಿಕ್ರಮದಲ್ಲಿ ಸ್ನಾನಮಾತ್ರವೇ ಎಂದು ಸ್ಮೃತಿಮುಕ್ತಾಫಲ ಕರ್ತ್ರಾದ್ಯಭಿಪ್ರಾಯವು. ಸ್ವಕುಲ ಶಿಷ್ಟಾಚಾರದಂತೆ ವ್ಯವಸ್ಥೆಯು. ವೈದಿಕಸಾರ್ವಭೌಮರ ಮತದಲ್ಲಿ ಸೋದರಮಾವನ ಪತ್ನಿಯು ಮೃತಳಾದರೆ ಸೋದರಸೊಸೆಗೆ ಆಶೌಚವಿಲ್ಲವು. ಸ್ಮೃತ್ಯಂತರದಲ್ಲಿ ಪಕ್ಷಿಣ್ಯಾಶೌಚವು ಹೇಳಲ್ಪಟ್ಟಿದೆ. ಅದರಂತೆ ಶಿಷ್ಟಾಚಾರವೂ ಇದೆ. ಮತ್ತು ತನ್ನ ಅಕ್ಕತಂಗಿಯರು, ಸೋದರತ್ತೆ, ಅಣ್ಣತಮ್ಮಂದಿರು, ಅವರ ಮಗ ಇವರುಗಳ ಮೃತಿಯಲ್ಲಿ ಸ್ತ್ರೀಯರಿಗೆ ಪರಸ್ಪರ ಪಕ್ಷಿಣ್ಯಾಶೌಚವೆಂದು ಶತಕಪಕ್ಷವು. ಸ್ಮೃತ್ಯಂತರ

ದಲ್ಲಿ ತ್ರಿರಾತ್ರವು ಅಕ್ಕತಂಗಿಯರಿಗೂ ಅಣ್ಣತಮ್ಮಂದಿರಿಗೂ ಪರಸ್ಪರ ಹೇಳಿರುವುದು. ಶಿಷ್ಟಾಚಾರವೂ ಮೂರುದಿನವಿದೆ. ಇದಕ್ಕೆ ಪ್ರಮಾಣವಚನವು ಮೇಲೆಯೇ ಬರೆಯಲ್ಪಟ್ಟಿದೆ.

ಇತಿ ಪಕ್ಷಿಣ್ಯಾಶೌಚ ನಿರ್ಣಯಃ.

## ಅಥ ದಿನಾಶೌಚವಿಷಯಃ—ಪುರುಷವಿಷಯೇ

ಅತ್ರಿ, ಪಾರಸ್ಕರ, ಯಾಜ್ಞವಲ್ಕ್ಯಾದಿ ವಚನಾನಾಂ, ವಿಜ್ಞಾನೇಶ್ವರ, ವೈದ್ಯನಾಥ, ವೈದಿಕಸಾರ್ವಭೌಮಾದಿ ಕೃತ ವ್ಯಾಖ್ಯಾನಾನುಸಾರೇಣ ದಿನಾಶೌಚ ವ್ಯವಸ್ಥಾ ಕ್ರಿಯತೇ | ಅಘವಿವೇಚನೇತು ಸಪತ್ನೀಮಾತೃ ಮೃತೌ ಸಪತ್ನೀಪುತ್ರ್ಯಾಃ—ದಿನಂ| ಭಿನ್ನೋದರ ಮಾತುಳಮೃತೌ ದಿನಂ| ಏತಾವದೇವೋಕ್ತಂ| ವೈದ್ಯನಾಥ, ವೈದಿಕಸಾರ್ವಭೌಮಾದಿಭಿ ರ್ವಕ್ಷ್ಯಮಾಣರೀತ್ಯಾ ಕಥಿತಂ | ತನ್ಮಯಾ ಲಿಖ್ಯತೇ | ಯದುಚಿತಂ ತದ್ಗ್ರಾಹ್ಯಂ | ತಥಾಹಿ || ಸಪತ್ನೀಮಾತುಃ ಪಿತ್ರೋಃ—ಭ್ರಾತೃ ತತ್ಪತ್ನ್ಯೋಃ—ತತ್ಪುತ್ರೀಪುತ್ರಯೋಃ—ಸಪತ್ನೀಮಾತೃಸ್ವಸುಃ—ತತ್ಪುತ್ರೀಪುತ್ರಯೋಃ—ಭಿನ್ನೋದರಸ್ವಸುಃ—ತತ್ಪುತ್ರೀಪುತ್ರಯೋಃ ಭಿನ್ನಪಿತೃವ್ಯಪುತ್ರ್ಯಾಃ—ಭಿನ್ನೋದರಭ್ರಾತೃಪುತ್ರ್ಯಾಃ—ಮಾತುರ್ಭಿನ್ನೋದರಭ್ರಾತುಃ— ತತ್ಪುತ್ರೀಪುತ್ರಯೋಃ-ಪಿತೃಭಿನ್ನೋದರಸ್ವಸೃತತ್ಪುತ್ರೀಪುತ್ರಾಣಾಂ ಏತೇಷಾಂ ವಿಂಶತಿಜನಾನಾಂ ಮೃತೌ ಪುರುಷಸ್ಯೈಕದಿನಂ | ತನ್ಮೃತೌ ತೇಷಾಂ ಚೈಕಾಹಂ ||

ಟೀ|| ಅತ್ರಿ, ಪಾರಸ್ಕರ, ಯಾಜ್ಞವಲ್ಕ್ಯಾದಿ ಸ್ಮೃತಿವಾಕ್ಯಗಳಿಗೆ ವಿಜ್ಞಾನೇಶ್ವರರು, ವೈದ್ಯನಾಥದೀಕ್ಷಿತರು, ವೈದಿಕಸಾರ್ವಭೌಮರು ಮಾಡಿರುವ ವ್ಯಾಖ್ಯಾನಕ್ಕೆ ಅನುಸಾರವಾಗಿ ಒಂದುದಿನಾಶೌಚ ವ್ಯವಸ್ಥೆಯು ಬರೆಯಲ್ಪಡುವುದು. ಅಘವಿವೇಚನವೆಂಬ ಒಂದುಗ್ರಂಥದಲ್ಲಿ, ಸಪತ್ನೀಮಾತೃಮೃತಿಯಲ್ಲಿ ಸಪತ್ನೀಪುತ್ರಿಗೆ ಒಂದುದಿನವು | ಭಿನ್ನೋದರ ಸೋದರಮಾವನ ಮೃತಿಯಲ್ಲಿ ಸೋದರಸೊಸೆಗೆ ಒಂದುದಿನಾಶೌಚವು | ಇಷ್ಟೇಹೇಳಲ್ಪಟ್ಟಿದೆ. ಭಿನ್ನೋದರ ಮಾತುಳನೆಂದರೆ, (೧) ತಾಯಿಯ ಸವತಿಯ ಅಣ್ಣತಮ್ಮಂದಿರು, (೨) ಸಾಕ್ಷಾತ್ತಾಯಿಗೆ ಭಿನ್ನೋದರ ಅಣ್ಣತಮ್ಮಂದಿರು. ಈ ಎರಡು ವಿಧದವರಿಗೂ ಭಿನ್ನೋದರ ಮಾತುಳರೆಂದು ಹೆಸರು. ಇವರ ಮೃತಿಯಲ್ಲಿ ಸ್ತ್ರೀಪುರುಷರಿಬ್ಬರಿಗೂ ಒಂದು ದಿನಾಶೌ

ಚವು. ವೈದ್ಯನಾಥ ವೈದಿಕಸಾರ್ವಭೌಮಾದಿಗಳಿಂದಲಾದರೋ ಮುಂದೆ ಬರೆಯುವ ಪ್ರಕಾರ ಇಪ್ಪತ್ತು ಜನಗಳಿಗೆ ದಿನಾಶೌಚವು ಹೇಳಲ್ಪಟ್ಟಿದೆ. ಯಾವುದು ಯುಕ್ತವೋ ಅದನ್ನು ಗ್ರಹಿಸಬೇಕು. ಲೋಕಾಚಾರದಲ್ಲೂ ಈ ದಿನಾಶೌಚಿಗಳ ಪೈಕಿ ಕೆಲವರ ಮೃತಿಯಲ್ಲಿ ಅನುಯೋಗಿ ಪ್ರತಿಯೋಗಿಗಳಿಗೆ ಒಂದು ದಿನಾಶೌಚಾನುಷ್ಠಾನವೂ, ಕೆಲವರ ಮೃತಿಯಲ್ಲಿ ಸ್ನಾನಮಾತ್ರವೂ ಎರಡು ಪ್ರಕಾರವಾಗಿದೆ. ಸ್ವಕುಲಾಚಾರದಂತೆ ವ್ಯವಸ್ಥೆಯು | ಇಲ್ಲಿ ಅನುಯೋಗಿ ಪ್ರತಿಯೋಗಿ ಎಂದರೆ ಅಕ್ಕತಂಗಿಯರುಗಳಿಗೆ ಅಣ್ಣತಮ್ಮಂದಿರು ಅನುಯೋಗಿಗಳು; ಅಣ್ಣತಮ್ಮಂದಿರಿಗೆ ಅಕ್ಕತಂಗಿಯರುಗಳು ಪ್ರತಿಯೋಗಿಗಳು; ಮತ್ತು ಸೋದರಮಾವನಿಗೆ ಸೋದರಳಿಯನು ಅನುಯೋಗಿ; ಸೋದರಳಿಯನಿಗೆ ಸೋದರಮಾವನು ಪ್ರತಿಯೋಗಿ; ಇದೇ ರೀತಿ ಎಲ್ಲಾವಾವೆಗಳಲ್ಲೂ ಇವನಿಗೆ ಅವನು ಅನುಯೋಗಿಯಾದರೆ ಅವನಿಗೆ ಇವನು ಪ್ರತಿಯೋಗಿಯೆಂದು ತಿಳಿದುಕೊಳ್ಳಬೇಕು.

ದಿನಾಶೌಚಿಗಳು ಯಾರೆಂದರೆ:—

೧ ಸಪತ್ನೀಮಾತೃವಿನ ತಂದೆ
೨ ಸಪತ್ನೀಮಾತೃವಿನ ತಾಯಿ
೩ ಸಪತ್ನೀಮಾತೃವಿನ ಅಣ್ಣತಮ್ಮಂದಿರು
೪ ಇವರ ಹೆಂಡತಿ
೫ ಇವರ ಮಗ
೬ ಇವರ ಮಗಳು
೭ ಸಪತ್ನೀ ಮಾತೃವಿನ ಅಕ್ಕತಂಗಿಯರು
೮ ಇವರ ಮಗ
೯ ಇವರ ಮಗಳು
೧೦ ಸವತೀತಾಯಿಯ ಹೊಟ್ಟೆಯಲ್ಲಿ ಹುಟ್ಟಿದ ಅಕ್ಕತಂಗಿಯರು
೧೧ ಇವರ ಮಗ
೧೨ ಇವರ ಮಗಳು
೧೩ ತಂದೆಯ ಸವತೀತಾಯಿಯ ಮಗನ ಮಗಳು
೧೪ ತನ್ನ ಸವತೀ ತಾಯಿಯ ಮಗನ ಮಗಳು
೧೫ (೧) ತಾಯಿಗೆ ಸವತಿಯ ಅಣ್ಣತಮ್ಮಂದಿರಾದ (ಭಿನ್ನೋದರ ಮಾತುಳರು)
(೨) ಸಾಕ್ಷಾತ್ತಾಯಿಗೆ ಭಿನ್ನೋದರರಾದ ಅಣ್ಣ ತಮ್ಮಂದಿರು (ಇವರೂ ಭಿನ್ನೋದರ ಮಾತುಳರು)
೧೬ ಈ ಎರಡುವಿಧ ಭಿನ್ನಮಾತುಳರ ಮಗ
೧೭ ಭಿನ್ನಮಾತುಳರ ಮಗಳು
೧೮ ತಂದೆಗೆ ಸವತೀತಾಯಿಯ ಮಗಳು
೧೯ ಇವಳ ಮಗ
೨೦ ಇವಳ ಮಗಳು

ಈ ಇಪ್ಪತ್ತು ಜನಗಳ ಮೃತಿಯಲ್ಲಿ ಬಬ್ಬ ದೇವದತ್ತನೆಂಬ ಪುರುಷನಿಗೆ ಒಂದುದಿನಾಶೌಚವು | ಈ ದೇವದತ್ತನ ಮರಣದಲ್ಲೂ ಮೇಲೆಹೇಳಿದ ಇಪ್ಪತ್ತು ಜನಗಳಿಗೂ ಒಂದುದಿನಾಶೌಚವು ||

ಈ ದಿನಾಶೌಚವಿಷಯದಲ್ಲಿ ಅನಿಯತದತ್ತನಿಗೆ—ಎಂದರೆ ಕೇವಲ ದತ್ತನಲ್ಲದವನಿಗೆ—ಸಂಗ್ರಹವಚನವು

ಶ್ಲೋ|| ಭಿನ್ನಪಿತ್ರೋಃ ಪಿತೃಭ್ರಾತೃ ಸ್ವಸೃಪತ್ಯಾನಿ ತತ್ಪ್ರಜಾಃ |
ಶುದ್ಧ್ಯಂತ್ಯಹ್ನಾ ಮಿಥಶ್ಯಾವೇ ಜನಾ ಸ್ತತ್ಪ್ರತಿಯೋಗಿನಃ ||

ಇತಿವಚನಸ್ಯಾರ್ಥಾಂತರಮಪಿ ವರ್ಣಯಂತಿ| ತದ್ಯಥಾ :—ದತ್ತಸ್ಯ ಪ್ರತಿಗೃಹೀತಾ ಭಿನ್ನಪಿತಾ | ತತ್ಸ್ತ್ರೀ ಭಿನ್ನಮಾತಾ | ತಸ್ಯಾಃಪಿತಾ-ಭ್ರಾತಾ-ಸ್ವಸಾ-ಪುತ್ರೀ-ತತ್ಪ್ರಜಾಶ್ಚ-ಪ್ರತಿಗೃಹೀತುಸ್ಸ್ವಸಾ-ತತ್ಪ್ರಜಾಶ್ಚ-ಮಿಥೋ ದಿನೇನ ಶುದ್ಧ್ಯಂತಿ | ಏತದನಿಯತದತ್ತವಿಷಯೇ ಪ್ರತಿಗೃಹೀತೃಕುಲೇ ದಿನಾಶೌಚವಿಷಯಂ | ಕೇವಲದತ್ತವಿಷಯಾಶೌಚಸ್ಯ ಪೂರ್ವಮೇವ ವ್ಯವಸ್ಥಾಪನಾತ್ ||

ಟೀ|| ನಿಯತದತ್ತನಲ್ಲದವನಿಗೆ ಪ್ರತಿಗೃಹೀತೃಕುಲದ ಈ ಕೆಳಗೆ ವಿವರಿಸಲ್ಪಡುವ ೨೧ ಜನರ ಮೃತಿಯಲ್ಲಿ ಒಂದು ದಿನಾಶೌಚವು | ಅವನ ಮೃತಿಯಲ್ಲೂ ಈ ೨೧ ಜನರಿಗೂ ಒಂದುದಿನಾಶೌಚವು | ನಿಯತದತ್ತನಲ್ಲದವನೆಂದರೆ—ನ್ಯಾಯವಾದ ದತ್ತು ಆಗದೇ ಇದ್ದವನೆಂದು ತಾತ್ಪರ್ಯವು | ನ್ಯಾಯವಾಗಿ ದತ್ತುವಾದವನ ವಿಷಯಕವಾದ ಆಶೌಚವು ಪೂರ್ವದಲ್ಲೇ ವ್ಯವಸ್ಥಾಪಿತವಾಗಿದೆ |

## || ಅನಿಯತದತ್ತಸ್ಯ ಸ್ವೀಕೃತಕುಲೇ ದಿನಾಶೌಚಿನಃ ||

| | |
|---|---|
| ೧ ದತ್ತುತೆಗದುಕೊಂಡ ತಂದೆ | ೧೦ ಇವರ ಮಗಳು |
| ೨ ದತ್ತುತೆಗೆದತಾಯಿ | ೧೧ ದತ್ತು ತಂದೆಯ ಮಗಳು |
| ೩ ಈ ದತ್ತು ತಂದೆಯ ತಂದೆ | ೧೨ ಇವಳ ಮಗ |
| ೪ ದತ್ತು ತಂದೆಯ ತಾಯಿ | ೧೩ ಇವಳ ಮಗಳು |
| ೫ ದತ್ತುತಂದೆಯ ಅಣ್ಣತಮ್ಮಂದಿರು | ೧೪ ಸ್ವೀಕೃತತಾಯಿಯ ತಂದೆ |
| ೬ ಇವರ ಮಗ | ೧೫ ಸ್ವೀಕೃತತಾಯಿಯ ತಾಯಿ |
| ೭ ಇವರ ಮಗಳು | ೧೬ ಸ್ವೀಕೃತತಾಯಿಯಅಕ್ಕತಂಗಿಯರು |
| ೮ ದತ್ತು ತಂದೆಯ ಅಕ್ಕತಂಗಿಯರು | ೧೭ ಇವರ ಮಗ |
| ೯ ಇವರ ಮಗ | ೧೮ ಇವರ ಮಗಳು |

೧೯ ಸ್ವೀಕೃತತಾಯಿಯ ಅಣ್ಣತಮ್ಮಂದಿರು | ೨೦ ಇವರ ಮಗ
೨೧ ಇವರ ಮಗಳು.

ಈ ಇಪ್ಪತ್ತೊಂದು ಜನಗಳ ಮೃತಿಯಲ್ಲಿ ಅನಿಯತ ದತ್ತಪುತ್ರನಿಗೂ ಇವನ ಮೃತಿಯಲ್ಲಿ ಈ ಇಪ್ಪತ್ತೊಂದು ಜನಗಳಿಗೂ ಒಂದುದಿನಾಶೌಚವೆಂದು ಒಂದು ಪ್ರಕಾರ ವ್ಯಾಖ್ಯಾನಮಾಡಿದ್ದಾರೆ. ವಚನಪ್ರಾಮಾಣ್ಯದಿಂದಲೇ ಇದರ ತಾರತಮ್ಯವನ್ನು ನಿಶ್ಚಯಿಸಬೇಕು.

## ॥ ಅನಿಯತದತ್ತಸ್ಯ ಜನಕಗೋತ್ರಸಂಬಂಧೇ ಪಕ್ಷಿಣ್ಯಾಶೌಚಿನಃ ॥

ಅನಿಯುತದತ್ತಸ್ಯ ಜನಕಕುಲಸಂಬಂಧೇ ಪಕ್ಷಿಣ್ಯಾಶೌಚಿನಃ । ದತ್ತಸ್ಯ ಜನನೀಜನಕರೂಪ ಪಿತ್ರೋಃ—ಪಿತೃ ಮಾತೃ ಷ್ವಸ್ರಪತ್ಯಾನಾಂ ತತ್ಪ್ರಜಾನಾಂಚ ಪಕ್ಷಿಣ್ಯಾಶೌಚಮೇವ । ಪಕ್ಷಿಣೀಮಸಪಿಂಡಯೋನಿಸಂಬಂಧೇ ಇತಿ ಯೋನಿಸಂಬಂಧ ನಿಬಂಧನೇನ ಪಕ್ಷಿಣೀವಿಧಾನಾತ್ । ಸ್ಮೃತ್ಯಂತರೇ

ಶ್ಲೋ॥ ದತ್ತಸ್ವಸರಿ ಸ್ವಸ್ರೀಯೆ ದತ್ತಭ್ರಾತೃ ಸುತಾಸ್ವಪಿ ।
ಪಿತೃಷ್ವಸುಶ್ಚ ತತ್ಪುತ್ರ ದುಹಿತ್ರೋಃ ಪಕ್ಷಿಣೀ ಮೃತೌ ॥
ಪಿತೃವ್ಯೇ ತದ್ದುಹಿತರಿ ತತ್ಪುತ್ರೇಷುಚ ಪಕ್ಷಿಣೀ ॥

ಇತಿವಚನಾತ್ । ಅತ್ರಾಸುಕ್ತಮಪೀದಂ ಅನಿಯತದತ್ತ ವಿಷಯತ್ವೇನೈವ ವ್ಯವಸ್ಥಾಪನೀಯ ಮಿತಿಭಾತಿ ॥

೧ ಜನಕ ತಂದೆ
೨ ಜನನೀ
೩ ಜನಕ ತಂದೆಯ ತಂದೆ
೪ ಜನಕ ತಂದೆಯ ತಾಯಿ
೫ ಜನಕ ತಂದೆಯ ಅಕ್ಕತಂಗಿಯರು
೬ ಇವರ ಮಗ
೭ ಇವರ ಮಗಳು
೮ ಜನಕ ತಂದೆಯ ಅಣ್ಣತಮ್ಮಂದಿರು
೯ ಇವರ ಮಗ
೧೦ ಇವರ ಮಗಳು
೧೧ ಜನಕ ತಂದೆಯ ಮಕ್ಕಳಾದ ತನ್ನ ಅಣ್ಣ ತಮ್ಮಂದಿರು
೧೨ ಅವರ ಮಗ
೧೩ ಅವರ ಮಗಳು
೧೪ ಜನಕ ತಾಯಿಯ ತಂದೆ
೧೫ ಜನಕ ತಾಯಿಯ ತಾಯಿ
೧೬ ಜನಕತಾಯಿಯ ಅಣ್ಣತಮ್ಮಂದಿರು
೧೭ ಇವರ ಮಗ

| | | | |
|---|---|---|---|
| ೧೮ | ಇವರ ಮಗಳು | ೨೨ | ಜನಕ ತಂದೆಯ ಹೊಟ್ಟೆಯಲ್ಲಿ ಹುಟ್ಟಿದ ತನ್ನ ಅಕ್ಕತಂಗಿಯರು |
| ೧೯ | ಜನಕ ತಾಯಿಯ ಅಕ್ಕತಂಗಿಯರು | | |
| ೨೦ | ಇವರ ಮಗ | ೨೩ | ಇವರ ಮಗ |
| ೨೧ | ಇವರ ಮಗಳು | ೨೪ | ಇವರ ಮಗಳು |

ಈ ೨೪ ಜನರ ಮೃತಿಯಲ್ಲಿ ಅನಿಯತ ದತ್ತನಿಗೆ ಪಕ್ಷಿಣ್ಯಾಶೌಚವೆಂಹೂ, ಈ ಅನಿಯತದತ್ತನ ಮರಣದಲ್ಲಿ ಈ ೨೪ ಜನರಿಗೂ ಪಕ್ಷಿಣ್ಯಾಶೌಚವೆಂದೂ ವಚನಬಲದಿಂದ ತೋರುತ್ತದೆ. ಈ ವಿಷಯದಲ್ಲಿ ಶಿಷ್ಟಾಚಾರಗಳು ಬಹು ಭಿನ್ನ ಭಿನ್ನವಾಗಿ ಕಂಡುಬರುವುದರಿಂದ ಅವರವರ ವೃದ್ಧಾಚಾರದಂತೆ ನಡೆಯಬೇಕು. ನಿಯತದತ್ತನಿಗಾದರೋ ಜನಕತಂದೆ, ಜನನೀ, ಸೋದರಭಿನ್ನೋದರಭ್ರಾತೃ ಇವರುಗಳ ಮರಣದಲ್ಲಿ ತ್ರಿರಾತ್ರಾಶೌಚವು ಹೇಳಲ್ಪಟ್ಟಿದೆ. ವಚನಪ್ರಾಮಾಣ್ಯದಿಂದ ಇದರ ತಾರತಮ್ಯವನ್ನು ನಿಶ್ಚಯಿಸಿಕೊಳ್ಳಬೇಕೇ ಹೊರತು ಸಮೀಪ ದೂರ ಸಂಬಂಧಾದಿ ನಿಮಿತ್ತದಿಂದ ನಿಶ್ಚಯಿಸುವುದಕ್ಕೆ ಸಾಧ್ಯವಿಲ್ಲ. ನಿಬಂಧನಕಾರರು ಹೀಗೆ ಹೇಳಿದ್ದಾರೆ ||

## || ಸ್ತ್ರೀವಿಷಯೇ ದಿನಾಶೌಚಂ ||

| | | | |
|---|---|---|---|
| ೧ | ಸವತೀ ತಾಯಿ. | ೧೨ | ಇವಳ ಮಗ. |
| ೨ | ಇವಳ ತಾಯಿ. | ೧೩ | ಇವಳ ಮಗಳು. |
| ೩ | ಇವಳ ತಂದೆ. | ೧೪ | ತಂದೆಗೆ ಸವತೀತಾಯಿಯ ಮಗ. |
| ೪ | ಸಪತ್ನೀ ಮಾತೃವಿನ ಭ್ರಾತೃಗಳು | ೧೫ | ಅವನ ಹೆಂಡತಿ. |
| ೫ | ಇವರ ಹೆಂಡತಿಯರು. | ೧೬ | ಸವತೀ ತಾಯಿಯ ಮಗ. |
| ೬ | ಇವರ ಮಗ. | ೧೭ | ಇವನ ಹೆಂಡತಿ. |
| ೭ | ಇವರ ಮಗಳು. | ೧೮ | ಇವನ ಮಗ. |
| ೮ | ಸವತೀತಾಯಿಯ ಅಕ್ಕತಂಗಿಯರು. | ೧೯ | ಇವನ ಮಗಳು. |
| ೯ | ಇವರ ಮಗ. | ೨೦ | ತಂದೆಗೆ ಸವತೀ ತಾಯಿಯ ಮಗಳು. |
| ೧೦ | ಇವರ ಮಗಳು. | ೨೧ | ಇವಳ ಮಗ. |
| ೧೧ | ಸವತೀ ತಾಯಿಯ ಮಗಳು. | ೨೨ | ಇವಳ ಮಗಳು. |

ಈ ೨೨ ಜನರ ಮೃತಿಯಲ್ಲಿ ಲಕ್ಷ್ಮೀ ಎಂಬ ಒಬ್ಬ ಸ್ತ್ರೀಗೆ ಒಂದುದಿನಾಶೌಚವು. ಈ ಲಕ್ಷ್ಮೀ ಎಂಬ ಸ್ತ್ರೀಯ ಮೃತಿಯಲ್ಲಿ ಸವತೀ ತಾಯಿ ಯೊಬ್ಬಳು

ಹೊರತು, ಬಾಕಿ ೨೧ ಜನಗಳಿಗೂ ಒಂದುದಿನಾಶೌಚವು. ಅವಳ ಸವತೀತಾಯಿ ಗಾದರೋ, ತಂದೆಗೆ ಪ್ರಾಪ್ತವಾದ ತ್ರಿದಿನಾಶೌಚವೇ. ಇಬ್ಬರು ಸವತಿಯರುಗಳಲ್ಲಿ ಒಬ್ಬಳ ಪಿತೃವರ್ಗಾಶೌಚವು ಇನ್ನೊಬ್ಬಳಿಗೆ ಇಲ್ಲವು. ಸ್ನಾನಮಾತ್ರವು. ಸವತಿಯ ತಂದೆ, ತಾಯಿ, ಅಣ್ಣತಮ್ಮಂದಿರು ಇವರ ಮೃತಿಯಲ್ಲಿ ಗಂಡನಿಗೆ ಪ್ರಾಪ್ತವಾದ ಆಶೌಚವು ಸವತಿಯರಿಬ್ಬರಿಗೂ ಉಂಟು. ಪತಿಯು ಮೃತನಾಗಿದ್ದರೆ ಸಪತ್ನೀ ಮಾತಾಪಿತೃವರ್ಗಾಶೌಚವು ಮತ್ತೊಂದು ಸಪತ್ನಿಗೆ ಇಲ್ಲವೆಂದು ವೈದ್ಯನಾಥಾದಿ ನಿಬಂಧನಕಾರರ ಅಭಿಪ್ರಾಯವು. ಈ ದಿನಾಶೌಚವು ಶಿಷ್ಟಾಚಾರದಲ್ಲಿ ಬಹುಭಿನ್ನವಾಗಿ ಕಂಡುಬರುವುದರಿಂದ ತಮ್ಮ ತಮ್ಮ ಶಿಷ್ಟಕುಲಾಚಾರದಂತೆ ವ್ಯವಸ್ಥೆಯು.

## ॥ ಸ್ಯಾಲಮೃತೌ ॥

ಸ್ಯಾಲಮೃತೌ ದಿನಂ । ಪರೋಕ್ಷೇ ಸ್ನಾನಂ. ಸ್ಯಾಲಿನ್ಯಾಮೃತೌ ನಾಶೌಚಮಿತ್ಯನ್ಯೇ । ಉಭಯಥಾಪ್ಯಾಚಾರೋ ದೃಶ್ಯತೇ ।

ಟೀ ॥ ಹೆಂಡತಿಯ ತಮ್ಮನ ಮೃತಿಯಲ್ಲೂ ಒಂದುದಿನಾಶೌಚವು. ಪರೋಕ್ಷದಲ್ಲಿ ಸ್ನಾನವು. ಎರಡು ವಿಧವಾದ ಆಚಾರವೂ ಇದೆ.

## ॥ ಸಬ್ರಹ್ಮಚಾರಿ ಮಹಾಮಂಡಲಾಧಿಪ ರಾಜಯೋರ್ಮೃತೌ ॥

ಸಬ್ರಹ್ಮಚಾರಿಣಾಂ ಮಹಾಮಂಡಲಾಧಿಪಸ್ಯ ರಾಜ್ಞಶ್ಚ ಮೃತೌ ದಿನಮಾತ್ರಂ । ಪರೋಕ್ಷೇ ಏಕಕಾಲಃ । ದೇಶಾಧಿಪರಾಜಮೃತೌ ಏಕಕಾಲಃ । ಏಕಾಚಾರ್ಯೋಪನೀತಃ ಸಬ್ರಹ್ಮಚಾರೀತ್ಯುಚ್ಯತೇ ॥

ಟೀ॥ ಸಬ್ರಹ್ಮಚಾರಿಯ ಮೃತಿಯಲ್ಲೂ ಮಹಾಮಂಡಲಾಧಿಪನಾದ ಚಕ್ರವರ್ತಿಯ ಮೃತಿಯಲ್ಲೂ ಒಂದುದಿನಾಶೌಚವು. ಪರೋಕ್ಷದಲ್ಲಾದರೆ ಒಂದು ಹೊತ್ತು. ತನ್ನ ದೇಶದ ದೊರೆಯ ಮೃತಿಯಲ್ಲಿ ಒಂದುಹೊತ್ತು ಆಶೌಚವು. [N. B. ಒಬ್ಬ ಆಚಾರ್ಯನಿಂದ ಉಪನೀತರಾದವರು ಪರಸ್ಪರ ಸಬ್ರಹ್ಮಚಾರಿಗಳು]

## ॥ ಸಹಾಧ್ಯಾಯಾದಿ ಮೃತೌ ॥

ಸಹಾಧ್ಯಾಯಿಮೃತೌ ಪಕ್ಷಿಣೀ । ಸಹಾಧೀತ ಕೃತ್ಸ್ನವೇದಸ್ಸಹಾಧ್ಯಾಯೀ । ಸಹಾಧೀತ ವೇದೈಕದೇಶಶ್ಚ ಸಹಾಧ್ಯಾಯೀ । ಜ್ಞಾಯಮಾನ ಸಗೋತ್ರ ಮೃತೌ ದಿನಮಾತ್ರಂ । ಯಸ್ಮಿನ್ದಿನೇ ಆಶೌಚಿಭಿಃ ಸಹಸಂಪರ್ಕಃ ತದ್ದಿನಮಾತ್ರಮಘಂ । ಪರೇದ್ಯುಸ್ಸ್ನಾನಾಚ್ಛುದ್ಧಿಃ । ಆಶೌಚಾನ್ನ ಭೋಜನೇ

ದಶರಾತ್ರಂ | ಕ್ರಿಯಾದ್ರವ್ಯ ತತ್ಸ್ತ್ರೀಣಾಂ ನಾಸ್ತಿ | ಇತಿ ಶತಕಪಕ್ಷಃ | ಕ್ರಿಯಾ ಯಾಅಪಿ ಆಶೌಚಮಸ್ತೀತಿ ವೈದ್ಯನಾಥಪಕ್ಷಃ | ವೇದೈಕದೇಶೋಪದೇಷ್ಟಾ ಉಪಾಧ್ಯಾಯಃ | ತನ್ಮೃತೌ ದಿನಂ | ಸ್ನಾನಮಾತ್ರ ಮಿತ್ಯನ್ಯೇ |

ಟೀ || ಸಹಾಧ್ಯಾಯಿಯ ಮರಣದಲ್ಲಿ ಪಕ್ಷಿಣ್ಯಾಶೌಚವು. ಒಂದು ವೇದ ವನ್ನು ಸಾಂಗವಾಗಿ ಜೊತೆಯಲ್ಲಿ ಅಧ್ಯಯನ ಮಾಡಿದವನಿಗೂ, ಕೆಲವು ಭಾಗವನ್ನು ಜೊತೆಯಲ್ಲಿ ಅಧ್ಯಯನ ಮಾಡಿದವನಿಗೂ ಸಹಾಧ್ಯಾಯಿ ಎಂದು ಹೆಸರು. ನಮ್ಮ ಸಗೋತ್ರನೆಂದು ಸ್ಮೃತಿವಿಷಯನಾದ ಸಗೋತ್ರನ ಮೃತಿಯಲ್ಲಿ ದಿನಮಾ ತ್ರಾಶೌಚವು. ಯಾವದಿವಸ ಆಶೌಚಿಗಳ ಸಂಪರ್ಕವಾಗುತ್ತದೆಯೋ ಆ ದಿನ ಮಾತ್ರ ಆಶೌಚವು. ಮಾರನೇದಿನ ಸ್ನಾನಮಾತ್ರದಿಂದಲೇ ಶುದ್ಧಿಯು. ಆಶೌ ಚಾನ್ನವನ್ನು ಭೋಜನ ಮಾಡಿದರೆ ಹತ್ತುದಿನಾಶೌಚವು. ಕರ್ಮಪದಾರ್ಥಗಳು ದ್ರವ್ಯ, ಪತ್ನೀ ಇವರುಗಳಿಗೆ ಸಾಂಸರ್ಗಿಕಾಶೌಚವಿಲ್ಲ. ಇಲ್ಲಿ ಪತಿಗೆ ಬಂದದ್ದು ಪತ್ನಿಗೆ ಇಲ್ಲ. ವೇದದಲ್ಲಿ ಕೆಲವುಭಾಗವನ್ನು ಹೇಳಿಕೊಟ್ಟವನೂ ಉಪಾಧ್ಯಾ ಯನು. ಅವನ ಮೃತಿಯಲ್ಲಿ ಒಂದುದಿನಾಶೌಚವು. ಸ್ನಾನಮಾತ್ರವೆಂದು ಕೆಲವರು.

### ಇತಿ ದಿನಾಶೌಚ ನಿರ್ಣಯಃ

## || ಅಥ ಸದ್ಯಶ್ಶೌಚಂ ||

ಜಾಮಾತು ರ್ಭಗಿನೀಭರ್ತುಶ್ಚ ಮೃತೌ ಸ್ನಾನಮಾತ್ರಂ | ಯಾದೃಚ್ಛಿಕ ಋತ್ವಿಗ್ಯಾಜಿನೋಃ, ಪರಸ್ಪರಂ ಸ್ನಾನಮಾತ್ರಂ | ಆಚಾರ್ಯಪುತ್ರೋಪಾಧ್ಯಾ ಯಯೋಃ ಪ್ರತಿಯೋಗಿ ಮೃತೌ ತಯೋಃ ಸ್ನಾನಮಾತ್ರಂ ||

ಟೀ || ಅಳಿಯ, ಅಕ್ಕತಂಗಿಯರ ಗಂಡ ಇವರ ಮರಣದಲ್ಲಿ ಸ್ನಾನಮಾ ತ್ರವು. ತಾತ್ಕಾಲಿಕಋತ್ವಿಕ್ ಯಜಮಾನರುಗಳಿಗೆ ಪರಸ್ಪರವಾಗಿ ಸ್ನಾನಮಾತ್ರ ವು. ಆಚಾರ್ಯಪುತ್ರ, ಉಪಾಧ್ಯಾಯ ಇವರ ಮೃತಿಯಲ್ಲಿಯೂ, ಇವರ ಪ್ರತಿ ಯೋಗಿಗಳ ಮೃತಿಯಲ್ಲಿಯೂ, ಪರಸ್ಪರ ಸ್ನಾನಮಾತ್ರವು. ಆಚಾರ್ಯಪುತ್ರನ ಮೃತಿ ಯಲ್ಲಿ ತ್ರಿದಿನಾಶೌಚವೆಂದು ಹಿಂದೆ ಹೇಳಿದ್ದಾರೆ. ಸ್ನಾನಮಾತ್ರವೆಂದು ಇಲ್ಲಿ ಹೇಳುತ್ತಾರೆ. ಉಪನಯನವನ್ನೂ ಸಾಂಗವಾಗಿ ವೇದೋಪದೇಶವನ್ನೂ ಮಾಡಿದ ಆಚಾರ್ಯರ ಪುತ್ರನ ವಿಷಯವು ಮೂರು ದಿನಾಶೌಚವೆಂದು ಭೇದವು.

## ॥ ಷಂಡ ಪತಿತಾದಿವಿಷಯೇ ದುರ್ಮೃತ ಸ್ವೈರಿಣೀ ವಿಷಯೇಚ ॥

ಷಂಡ, ಪಾಷಂಡ, ಪತಿತ, ಬ್ರಹ್ಮಶಾಪಹತ, ಕ್ಲೀಬ, ಗರದ, ಪರದಾರಾಭಿಗಾಮಿ, ಬ್ರಹ್ಮಹಾ, ಸುರಾಪಃ, ಸ್ತೇನ, ಗುರುತಲ್ಪಗ, ಗರ್ಭಭರ್ತೃಘಾತಕೀ, ಅನಾಶ್ರಮಿಣಾ, ಬುದ್ಧಿಪೂರ್ವಕಮಾತ್ಮಘಾತೀ, ವೃಥಾಜಾತಾನಾಂ, ವ್ಯಭಿಚಾರಿಣೀನಾಂ ಮೃತಾಸ್ನಾನಂ । ತಸ್ಯಾಃ ಪುತ್ರಜನನೇಚ ನಾಶೌಚಂ । ಏತೇಷಾಂ ಮರಣೇ ಸದ್ಯಃ ಪ್ರಾಯಶ್ಚಿತ್ತಾ ಶಕ್ತ್ಯಾ ಅಮಂತ್ರದಾಹೇ ಸ್ನಾನಮಾತ್ರಂ । ಪ್ರಾಯಶ್ಚಿತ್ತಾನಂತರಂ ಸಂಸ್ಕಾರೇ ತ್ರಿರಾತ್ರಮಾಶೌಚಗ್ರಹಣಮುಕ್ತಂ । ಘಟಸ್ಫೋಟನ ಗೋತ್ರತ್ರಾ ಗಾನಂತರಂ ಪತಿತಾದಿಮರಣೇ ತೇಷಾಂ ಪುತ್ರಜನನೇಚ ನಾಶೌಚಂ । ಅಘದೀಪಿಕಾಯಾಂ :—

ಶ್ಲೋ ॥ ಸ್ವೈರಿಣ್ಯಾಂ ಪುತ್ರಜನನೇ ಸೂತಕಂ ನವಿಧೀಯತೇ ।
ಮರಣೇಪ್ಯೇವ ಮೇವಸ್ಯಾನ್ನಿಷ್ಕೃತೌತ್ವಘಮಿಷ್ಯತೇ ॥ ಇತಿ

ವೈದಿಕಸಾರ್ವಭೌಮೈಸ್ತು, ಏತೇಷಂಡಾದಯಃ ತದಾಸೀಂ ತೂಷ್ಣೀಂ ದಾಹ್ಯಾಃ; ಪಶ್ಚಾತ್ಕಾಲಾಂತರೇ ಮಂತ್ರವದ್ದಾಹ್ಯಾ ಇತ್ಯುಕ್ತಂ । ಪ್ರಾಚೀನ ಷಡಶೀತೌ :—

ಶ್ಲೋ ॥ ಅನ್ಯಪೂರ್ವಾಪರುದ್ಧಾಸು ತ್ರಿದಿನಾಚ್ಛುದ್ಧಿರಿಷ್ಯತೇ ।
ತಾಸ್ವೇವಾ ನನ್ಯ ಪೂರ್ವಾಸು ಪಂಚಾಹೋಭಿರ್ವಿಶುಧ್ಯತಿ ॥

ವಿವಾಹಿತಾಸ್ತ್ರೀ, ಸ್ವವರ್ಣಪುರುಷಾಂತರೇಣ, ಉತ್ತಮವರ್ಣಪುರುಷಾಂತರೇಣವಾ, ಪ್ರಸೂತಾಚೇದ್ಬೀಜಪುರುಷಸ್ಯತ್ರಿರಾತ್ರಂ । ಅವಿವಾಹಿತಾಚೇದ್ಬೀಜಿನಃ ಪಂಚಾಹಂ । ತಸ್ಯಾಮರಣೇಪಿ ತಥೈವ । ಬೀಜಜ್ಞಾತೀನಾಂ ನಾಶೌಚಂ । ಇತಿ । ಅಸ್ಯಕಲಾವನುಷ್ಠಾನಂ ನದೃಶ್ಯತೇ ।

ಟೀ ॥ ನಪುಂಸಕ, ಕುತ್ಸಿತಶಾಸ್ತ್ರಾಧ್ಯಾಯಿಣಾ, ವೇದವಿರೋಧೀ, ಜಾತಿಭ್ರಷ್ಟ, ಬ್ರಾಹ್ಮಣರ ಶಾಪದಿಂದ ಗ್ರಸ್ತನಾದವನು, ಸ್ತ್ರೀನಪುಂಸಕಳು, ವಿಷಹಾಕತಕ್ಕವನು, ಪರಸ್ತ್ರೀಗಮನಮಾಡಿದವನು, ಬ್ರಹ್ಮಹತ್ಯಮಾಡಿದವನು, ಮದ್ಯಪಾನಮಾಡತಕ್ಕವನು, ಚಿನ್ನವನ್ನು ಕಳುವವನು, ಗುರುಪತ್ನೀಗಮನಮಾಡಿದವನು ; ಗರ್ಭಪಾತ ಮತ್ತು ಪತಿಘಾತಮಾಡಿದವಳು, ಆಶ್ರಮಧರ್ಮವನ್ನು ತ್ಯಾಗಮಾಡಿದವನು, ಬುದ್ಧಿಪೂರ್ವಕವಾಗಿ ಆತ್ಮಹತ್ಯ ಮಾಡಿಕೊಂಡವನು, ಸ್ವಲ್ಪವೂ ಲೋಕೋಪಕಾರಮಾಡದೇ ಇದ್ದವನು ಎಂದರೆ ನಿಷ್ಪ್ರಯೋಜನವಾಗಿ ಹುಟ್ಟಿದವನು, ವ್ಯಭಿ

ಚಾರಸ್ತ್ರೀ, ಇವರುಗಳ ಮರಣದಲ್ಲಿ ಸಪಿಂಡಾದಿಗಳಿಗೆ ಸ್ನಾನಮಾತ್ರವು. ಮೇಲೆ ಹೇಳಿದ ದುಷ್ಟಸ್ತ್ರೀಗೆ ಪುತ್ರಜನನವಾದರೂ, ಮರಣವಾದರೂ, ಆಶೌಚವಿಲ್ಲ. ಪೂರ್ವೋಕ್ತಪತಿತಾದಿಗಳಿಗೆ ವಿಧ್ಯುಕ್ತಪ್ರಾಯಶ್ಚಿತ್ತವಿಲ್ಲದೇ, ಅಮಂತ್ರಕದಾಹದಲ್ಲಿ ಸ್ನಾನದಿಂದಲೇ ಶುದ್ಧಿಯು. ವಿಧ್ಯುಕ್ತಪ್ರಾಯಶ್ಚಿತ್ತಾನಂತರ ಸಂಸ್ಕಾರಮಾಡುವಲ್ಲಿ ಸಪಿಂಡರಿಗೆ ತ್ರಿರಾತ್ರಾಶೌಚವು. ವಿಧ್ಯುಕ್ತಘಟಸ್ಫೋಟನ ಗೋತ್ರತ್ಯಾಗಾದಿಗಳನ್ನು ಹೊಂದಿದ ಪತಿತರ ಮರಣದಲ್ಲಿಯೂ, ಅವರ ಪುತ್ರಜನನದಲ್ಲಿಯೂ, ಆಶೌಚವಿಲ್ಲ. ಇಂಥಾ ಷಂಡಾದಿಜ್ಞಾತಿಮೃತಿಯಲ್ಲಿ ಮಂತ್ರವರ್ಜಿತವಾಗಿ ದಹನ ಮಾಡಿ ಕಾಲಾಂತರದಲ್ಲಿ ಪ್ರಾಯಶ್ಚಿತ್ತಪೂರ್ವಕವಾಗಿ ಮಂತ್ರಪೂರ್ವಕಸಂಸ್ಕಾರ ಮಾಡಬೇಕೆಂದು ವೈದಿಕ ಸಾರ್ವಭೌಮರ ಮತವು. ವಿವಾಹಿತಳಾದ ಸ್ತ್ರೀಯು ಸವರ್ಣ (ತನ್ನ ಜಾತಿಯ) ಮತ್ತು ಉತ್ತಮವರ್ಣದ ಪುರುಷಾಂತರದಿಂದ ಪ್ರಸವಿಸಿದರೆ ಬೀಜಪುರುಷನಿಗೆ ಮೂರುದಿನ ಜನನಾಶೌಚವು. ಅವಳ ಮೃತಿಯಲ್ಲಿ ಮೂರುದಿವಸ ಮರಣಾಶೌಚವು. ಆ ಸ್ತ್ರೀಯು ಅವಿವಾಹಿತಳಾಗಿದ್ದರೆ ಅವಳು ಪ್ರಸವಿಸಿದರೂ, ಮೃತಿಯನ್ನು ಹೊಂದಿದರೂ ಬೀಜಪುರುಷನಿಗೆ ಐದು ದಿನ ಅಶೌಚವು ; ಬೀಜಪುರುಷನ ಜ್ಞಾತಿಗಳಿಗೆ ಆಶೌಚವಿಲ್ಲ ; ಎಂದು ಪ್ರಾಚೀನಷಡಶೀತಿ ಮತವು. ಇದು ಕಲಿಯುಗದಲ್ಲಿ ಕೆಲವು ಶೂದ್ರರಲ್ಲಿ ಮಾತ್ರವಿದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಈ ಮೂರು ವರ್ಣದಲ್ಲಿಲ್ಲ. ಹಾಗೆ ನಡೆದರೆ ಆ ಸ್ತ್ರೀ ಪುರುಷರಿಬ್ಬರೂ ಮೇಲೆ ಹೇಳಿದಂತೆ ಪತಿತರು.

## || ಬ್ರಹ್ಮಚಾರಿಣಾಂ—ಸನ್ಯಾಸಿನಾಂ ||

ಬ್ರಹ್ಮಚಾರಿಣಾಂ ಸನ್ಯಾಸಿನಾಂ ಚ ಸಪಿಂಡಾದಿಮರಣೇ ಸ್ನಾನಮಾತ್ರಂ | ಬ್ರಹ್ಮಚಾರಿಮರಣೇ ತತ್ಸಪಿಂಡಾದೀನಾಂ ಯಥಾಕ್ರಮಮಾಶೌಚಮಸ್ತಿ| ಸನ್ಯಾಸಿಮರಣೇಸಪಿಂಡಾದೀನಾಂ ಸಚೇಲಂ ಸ್ನಾನತಶ್ಶುದ್ಧಿಃ | ಬ್ರಹ್ಮಚಾರಿಣಾಮಾಶೌಚಾಭಾವಃ, ನಿಯತಬ್ರಹ್ಮಚಾರಿ ವಿಷಯ ಇತಿ ಕೇಚನವದಂತಿ | ಯಥಾದೇಶಶಿಷ್ಟಾಚಾರಾದಿನಾವ್ಯವಸ್ಥಾ ||

ಟೀ || ಬ್ರಹ್ಮಚಾರಿಗಳಿಗೂ, ಸನ್ಯಾಸಿಗಳಿಗೂ, ಸಪಿಂಡರ ಮತ್ತು ಬಂಧು ಮೊದಲಾದವರ ಮರಣದಲ್ಲಿ ಆಶೌಚವಿಲ್ಲ. ಸ್ನಾನಮಾತ್ರವು. ಬ್ರಹ್ಮಚಾರಿಯ ಮರಣದಲ್ಲಿ ಸಪಿಂಡ, ಬಂಧು ಮೊದಲಾದವರಿಗೆ ಯಥಾಕ್ರಮವಾದ ಆಶೌಚವುಂಟು. ಸನ್ಯಾಸಿಗಳ ಮರಣದಲ್ಲಿ ಜ್ಞಾತಿಗಳಿಗೆ ಸಚೇಲ (ಉಟ್ಟುಹೊದೆದಿರುವ

ಬಟ್ಟೆಯೊಡನೆ) ಸ್ನಾನಮಾತ್ರದಿಂದ ಶುದ್ಧಿಯು. ಜ್ಞಾತ್ಯಾದಿಗಳ ಮೃತಿಯಲ್ಲಿ ಬ್ರಹ್ಮಚಾರಿಗಳಿಗೆ ಆಶೌಚವಿಲ್ಲವೆಂಬುದು ನಿಯತಬ್ರಹ್ಮಚಾರಿ ವಿಷಯವೆಂದು ಕೆಲವರ ಅಭಿಪ್ರಾಯವು ; ನಿಯತಬ್ರಹ್ಮಚಾರಿಯೆಂದರೆ ಗುರುಕುಲವಾಸ, ವೇದಾಧ್ಯಯನ, ಆಶೌಚಸಂಪರ್ಕಾದಿಗಳಿಲ್ಲದಿರುವಿಕೆ, ಸ್ವಕರ್ಮನಿಷ್ಠತೆ, ಇತ್ಯಾದಿಗಳಿಂದ ಕೂಡಿದ ಬ್ರಹ್ಮಚಾರಿಗೆ ಮಾತ್ರ ಆಶೌಚವಿಲ್ಲವೆಂದೂ, ಇದಕ್ಕೆ ವ್ಯತ್ಯಸ್ತವಾದ ಬ್ರಹ್ಮಚಾರಿಗೆ ಆಶೌಚವುಂಟೆಂದೂ ಕೆಲವರ ಅಭಿಪ್ರಾಯವು. ಪ್ರಕೃತೆ ಶ್ರೀವೈಷ್ಣವರಲ್ಲಿಯೂ, ದ್ರಾವಿಡದೇಶದಲ್ಲಿ ಕೆಲವು ಸ್ಮಾರ್ತ ಮಧ್ವ ಮತಸ್ಥರಲ್ಲಿಯೂ, ಬ್ರಹ್ಮಚಾರಿಗಳು ಆಶೌಚಾನುಷ್ಠಾನವನ್ನು ಮಾಡುತ್ತಿಲ್ಲ. ಇತರ ದೇಶದಲ್ಲಿ ಸ್ಮಾರ್ತ, ಮಾಧ್ವ ಈ ಎರಡು ಮತದವರಲ್ಲಿಯೂ, ಬ್ರಹ್ಮಚಾರಿಗಳೂ ಆಶೌಚಾನುಷ್ಠಾನವನ್ನು ಅನಾದಿಯಾಗಿಯೂ ಶಿಷ್ಟರು ಅನುಷ್ಠಾನಮಾಡುತ್ತಿದ್ದಾರೆ. ದೇಶಕುಲಾಚಾರದಂತೆ ಇದಕ್ಕೂ ವ್ಯವಸ್ಥೆಯೆಂದು ತಾತ್ಪರ್ಯವು.

|| ಬ್ರಹ್ಮಚಾರಿಣಾಂ ಮಾತಾಪಿತ್ರಾದಿ ಕರ್ತೃತ್ವಸಂಭವೇ ||

ಬ್ರಹ್ಮಚಾರಿಣಾಂ ಮಾತಾಪಿತ್ರಾದಿ ಕ್ರಿಯಾಕರ್ತೃತ್ವಸಂಭವೇ ಕೃತ್ಯೋತ್ತರ ಮಾಪ್ಲವಾಚ್ಛುದ್ಧಿಃ | ಆಶೌಚಾನ್ನಪಾನಾದೌ ದಶರಾತ್ರಮಾಶೌಚಂ | ತತಶ್ಚ ಪುನರುಪನಯನಂ | ಮಾತುಃ ಪಿತುಶ್ಚ ಯೋನಿಸಂಬಂಧೇ ಪಂಚಮಸಪ್ತಮಾವಧಿ ಬಂಧುಜನೇಮೃತೇಸ್ನಾನಮಾತ್ರಂ | ಅತ್ರಪುನರುಪನಯನ ವಿಧಾನಂ ದ್ರವ್ಯಲೋಭೇನ ಜ್ಞಾತಿಬಂಧ್ವಿತರ ಕ್ರಿಯಾಕರ್ತೃತ್ವವಿಷಯಂ | ನತುಮಾತಾಪಿತ್ರಾದಿಕ್ರಿಯಾ ಕರ್ತೃಬ್ರಹ್ಮಚಾರಿವಿಷಯಂ | ಇತಿ | ಅಪಿಚ | ಮನುಃ—

ಶ್ಲೋ || ಆದಿಷ್ಟೀನೋದಕಂ ಕುರ್ಯಾದಾವ್ರತಸ್ಯ ಸಮಾಪನಾತ್ |
ಸಮಾಪ್ತೇತೂದಕಂದತ್ವಾತ್ರಿರಾತ್ರ ಮಶುಚಿರ್ಭವೇತ್ ||

ಇತ್ಯಾದಿನಾಬ್ರಹ್ಮಚಾರಿಣಃ ಸಮಾವರ್ತನಾನಂತರಂ ವತ್ಸರಾದರ್ವಾಙ್ಮೃತಜ್ಞಾತ್ಯಾದೇಸ್ತ್ರಿರಾತ್ರಮಾಶೌಚಾದಿ ವಿಧಾನಂ ಶಿಷ್ಟಾಚಾರಾಭಾವಾದುಪೇಕ್ಷ್ಯಮಿತಿ ವಿಜ್ಞಾನೇಶ್ವರ ವೈದ್ಯನಾಥಾದಿಭಿರಭಿಹಿತಂ |

ಟೀ || ಮಾತಾಪಿತೃ ಮಾತಾಮಹಾದಿಗಳಿಗೆ ಕ್ರಿಯಾನಡೆಸಬೇಕಾದ ಸಂಭವವು ಬ್ರಹ್ಮಚಾರಿಗಳಿಗೆ ಪ್ರಾಪ್ತವಾದರೆ ಕ್ರಿಯೆಯನ್ನು ನಡೆಸಿದನಂತರ ಪ್ರತಿದಿನವೂ ಸ್ನಾನಮಾತ್ರದಿಂದ ಶುದ್ಧಿಯು. ಆಶೌಚಸಂಬಂಧವಾದ ಅನ್ನಪಾನಾದಿಗಳುಂಟಾದರೆ ದಶರಾತ್ರಾಶೌಚವು. ಅನಂತರ ಪುನರುಪನಯನವೂ ಆಗಬೇಕು.

ಆದುದರಿಂದ ಬ್ರಹ್ಮಚಾರಿಗಳು ಮಾತಾಪಿತ್ರಾದಿಗಳಿಗೆ ಕ್ರಿಯಾನಡೆಸುವ ಕಾಲದಲ್ಲೂ ಆಯಾಯದಿನ ಸ್ನಾನಾನಂತರ ಶುದ್ಧರು. ಆಶೌಚಾನ್ನಾದಿ ಸಂಪರ್ಕಗಳನ್ನು ಬಿಡಬೇಕು. ಬಂಧುಗಳ ಮರಣದಲ್ಲೂ ಬ್ರಹ್ಮಚಾರಿಗಳಿಗೆ ಸ್ನಾನಮಾತ್ರವು. ಸನ್ಯಾಸಿಗಳಿಗೆ ಪಿತ್ರಾದಿಮರಣದಲ್ಲೂ ಸ್ನಾನಮಾತ್ರವೇ. ಬ್ರಹ್ಮಚಾರಿಗಳು ಪಿತ್ರಾದಿಗಳಿಗೆ ಕರ್ಮವನ್ನು ಮಾಡಲೇಬೇಕು ಆಶೌಚಿಗಳ ಸಂಪರ್ಕಾದಿಗಳನ್ನು ಬಿಟ್ಟೇ ಇರಬೇಕೆಂದು ಹೇಳಿದಂತಾಯಿತು. ಧನಾರ್ಥವಾಗಿ ಅನ್ಯರಿಗೆ ಪರಲೋಕ ಕ್ರಿಯೆಗಳನ್ನೂ ಆಶೌಚಾನ್ನಭೋಜನಾದಿ ಸಂಸರ್ಗವನ್ನೂ ಮಾಡಿದರೆಮಾತ್ರ ಪುನರುಪನಯನವನ್ನು ಮಾಡಬೇಕು. ಮಾತಾಪಿತೃ ಭ್ರಾತೃ ಮಾತಾಮಹಾದಿಗಳಿಗೆ ಕ್ರಿಯೆಯನ್ನು ಮಾಡಿದರೆ ಪುನರುಪನಯನವಿಲ್ಲವು. ಮತ್ತು ಬ್ರಹ್ಮಚಾರಿಯು ಸಮಾವರ್ತನಾನಂತರ ಆಸಂವತ್ಸರ ಮಧ್ಯೆ ಮೃತರಾದ ಜ್ಞಾತ್ಯಾದಿಗಳ ಅತಿಕ್ರಾಂತ ತ್ರಿರಾತ್ರಾದ್ಯಾಶೌಚವನ್ನು ಅನುಷ್ಠಾನಮಾಡಬೇಕೆಂಬ ಮನುವಚನವು ಲೋಕದಲ್ಲಿ ಶಿಷ್ಟಾಚಾರವಿಲ್ಲವಾದುದರಿಂದ ಉಪೇಕ್ಷ್ಯವೆಂದು ವಿಜ್ಞಾನೇಶ್ವರ ವೈದ್ಯನಾಥಾದಿಗಳಿಂದ ಹೇಳಲ್ಪಟ್ಟಿರುವುದರಿಂದ ಸಮಾವರ್ತನಾನಂತರದಲ್ಲಿ ಆಶೌಚಾನುಷ್ಠಾನವಿಲ್ಲ.

## ಕೃಚ್ಛ್ರಾದಿಸಮಯೇ ವಿವಾಹಾದೌ ಶ್ರಾದ್ಧೇಚ ಆಶೌಚ ಶ್ರವಣೇ ||

ಕೃಚ್ಛ್ರಾದಿ ನಿಯಮಯುಕ್ತಸ್ಯ ತನ್ಮಧ್ಯೇ ಜನನಾಶೌಚಶ್ರವಣೇ ನಾಸ್ತ್ಯಾಶೌಚಂ | ಮರಣಾಶೌಚಶ್ರವಣೇತು ಸ್ನಾನಮಾತ್ರಂ | ದೇವೋತ್ಸವೇ, ಯಜ್ಞಕರ್ಮಣಿ, ವಿವಾಹಾದ್ಯುತ್ಸವೇಷುಚ, ಆಚಾರ್ಯ, ಋತ್ವಿಗ್ಯಜಮಾನ ಪರಿಚಾರಕಾಣಾಂ ವಟೋಃ ಕನ್ಯಾವರಯೋಶ್ಚ ನಾಶೌಚಂ | ಮರಣಾಶೌಚೇತು ಸ್ನಾನಮಾತ್ರಂ | ಶ್ರಾದ್ಧೇಷು ಪಾಕಾನಂತರಂ ಕರ್ತುಃ, ಸಂಕಲ್ಪಾತ್ಪರಂ, ವರಣಾನಂತರಂ, ಭೋಕ್ತುಶ್ಚ, ನಾಶೌಚಂ || ಅತ್ರ ಪಾಕಾನಂತರ ಮಿತ್ಯುಕ್ತಾ ದ್ವಿತೀಯ್ಯುವರಣಾನಂತರಮಿತಿ ಸ್ಮೃತಿಮುಕ್ತಾಫಲಾದೌ ವ್ಯಾಖ್ಯಾತಂ | ಶ್ರಾದ್ಧಸಂಕಲ್ಪಾತ್ಪರಂ ಭೋಜನೋಪಕ್ರಮಾತ್ಪೂರ್ವಂ ಕರ್ತುರ್ಭೋಕ್ತುಶ್ಚ ಮರಣಾಶೌಚಶ್ರವಣೇ ಸ್ನಾನಮಾತ್ರಂ; ತದನಂತರಂ ಶ್ರವಣೇ ಸ್ನಾನಮಪಿ ನಾಸ್ತೀತಿ ವೈದಿಕಸಾರ್ವಭೌಮಾದಿಮತಂ ||

ಟೀ || ಪ್ರಾಜಾಪತ್ಯ ಚಾಂದ್ರಾಯಣಾದಿ ಕೃಚ್ಛ್ರ, ದೀಕ್ಷಾ, ನಿಯಮ, ಮಧ್ಯದಲ್ಲಿ ಜನನಾಶೌಚವು ಪ್ರಾಪ್ತವಾದರೆ ಆಶೌಚವಿಲ್ಲ. ಮರಣಾಶೌಚ ಶ್ರವ

ಣದಲ್ಲಿ ಸ್ನಾನಮಾತ್ರವು. ದೇವೋತ್ಸವದಲ್ಲಿಯೂ ಯಜ್ಞಕರ್ಮದಲ್ಲಿಯೂ ವಿವಾಹಾದ್ಯುತ್ಸವಗಳಲ್ಲಿಯೂ ಆಚಾರ್ಯ, ಋತ್ವಿಕ್, ಯಜಮಾನ, ಪರಿಚಾರಕರು ಗಳಿಗೂ ಉಪನಯನದಲ್ಲಿ ವಟುವಿಗೂ, ವಿವಾಹದಲ್ಲಿ ಕನ್ಯಾವರರಿಗೂ ಸಹ ಆಶೌ ಚವಿಲ್ಲವು. ಮರಣಾಶೌಚದಲ್ಲಿ ಸ್ನಾನಮಾತ್ರವು. ಶ್ರಾದ್ಧದಲ್ಲಿ ಪಾಕಾನಂತರ ದಲ್ಲಿ ಕರ್ತೃವಿಗೂ ಸಂಕಲ್ಪಾತ್ಪರ ವರಣಾನಂತರದಲ್ಲಿ ಭೋಕ್ತೃವಿಗೂ ಆಶೌಚ ವಿಲ್ಲ. ಪಾಕಾನಂತರವೆಂದರೆ ಎರಡನೆಯ ವರಣಾನಂತರವೆಂದು ಸ್ಮೃತಿಮುಕ್ತಾ ಫಲದಲ್ಲಿ ವ್ಯಾಖ್ಯಾನಮಾಡಿದ್ದಾರೆ. ಶ್ರಾದ್ಧಸಂಕಲ್ಪಾನಂತರ ಕರ್ತೃವಿಗೂ, ಭೋಜನೋಪಕ್ರಮಕ್ಕೆ ಪೂರ್ವದಲ್ಲಿ ಭೋಕ್ತೃವಿಗೂ, ಮರಣಾಶೌಚ ಶ್ರವಣ ದಲ್ಲಿ ಸ್ನಾನಮಾತ್ರವು. ಅನಂತರ ಶ್ರವಣವಾದರೆ ಸ್ನಾನವೂ ಸಹ ಇಲ್ಲವೆಂದು ವೈದಿಕಸಾರ್ವಭೌಮಾದಿಗಳ ಮತವು.

## ॥ ಚೌಲಾದ್ಯುತ್ಸವ ವಿಷಯೇ ॥

ಚೌಲಾದ್ಯುತ್ಸವೇಷು ಭೋಜನಮಧ್ಯೇ ಶುಭಕರ್ತುರಘಸಂಭವೇ ಪರೈ ರ್ದೇಯಂ ಭೋಕ್ತವ್ಯಂಚ । ಭೋಜನಾನಂತರ ಕರಣೀಯ್ಯಾಮಾಚಮನಂ ಅನ್ಯ ಗೇಹೋದಕೇನ ಕಾರ್ಯಂ । ಯಜ್ಞಕರ್ಮಣಿ ಚೌಲಾದ್ಯುತ್ಸವ ಶ್ರಾದ್ಧಾದೌ ಸರ್ವತ್ರ ಪ್ರಾಕ್ಪ್ರಾತ್ಪರ್ಥೇಷು ನಾಸ್ತ್ಯಘಂ । ಅನ್ಯತ್ಸರ್ವಂ ಸ್ಮೃತಿಸಾರ ಸಂಗ್ರಹೇ ವಿಸ್ತರೇಣೋಕ್ತಂ । ಕೇಚನ ವಿಷಯಾವಿವಾತ್ರಲಿಖ್ಯಂತೇ ॥

ಟೀ ॥ ಚೌಲಾದಿ ಶುಭಕರ್ಮಗಳಲ್ಲಿ ಭೋಜನ ಮಧ್ಯದಲ್ಲಿ ಶುಭಕರ್ಮ ಕರ್ತೃವಿಗೆ ಆಶೌಚವು ಪ್ರಾಪ್ತವಾದರೆ ಅನ್ಯರಿಂದ ಬಡಿಸಲ್ಪಡತಕ್ಕದ್ದು. ಭೋಜನ ವನ್ನು ಮಾಡಬಹುದು. ಭೋಜನಾನಂತರ ಮಾಡಬೇಕಾದ ಆಚಮನವನ್ನು ಬೇರೆಯವರ ಮನೆಯ ನೀರಿನಿಂದ ಮಾಡಬೇಕು. ಯಜ್ಞಕರ್ಮದಲ್ಲೂ, ಚೌಲಾ ದ್ಯುತ್ಸವದಲ್ಲೂ, ಶ್ರಾದ್ಧಗಳಲ್ಲಿಯೂ ಮೊದಲು ಸಿದ್ಧವಾಗಿದ್ದ ಪದಾರ್ಥಗಳಿಗೆ ಆಶೌಚವಿಲ್ಲವು. ಬಾಕಿ ಹೆಚ್ಚು ವಿಷಯಗಳು ಸ್ಮೃತಿಸಾರಸಂಗ್ರಹವೆಂಬ ಗ್ರಂಥ ದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿವೆ. ಕೆಲವು ವಿಷಯಗಳನ್ನು ಮಾತ್ರ ಇಲ್ಲಿ ಸಂಕ್ಷೇಪವಾಗಿ ತೋರಿಸುತ್ತೇನೆ.

## ರಾಜ, ಶಿಲ್ಪಿ, ವೈದ್ಯ, ಪುರೋಹಿತ, ರಾಜಕಾರ್ಯೇ ನಿಯುಕ್ತಾದೀನಾಂ ಸದ್ಯಶ್ಶೌಚಂ ॥

ಶ್ಲೋ ॥ ರಾಜರ್ತ್ವಿಗ್ದೀಕ್ಷಿತಾನಾಂಚ ಬಾಲೇ ದೇಶಾಂತರೇ ತಥಾ ।
ವ್ರತಿನಾಂ ಸತ್ರಿಣಾಂ ಚೈವ ಸದ್ಯಶ್ಶೌಚಂ ವಿಧೀಯ್ಯತೇ ॥

ಚಂದ್ರಿಕಾಯಾಂ :—

ಶ್ಲೋ || ನರೇಂದ್ರ ಸತ್ರಿವ್ರತಿನಾಂ ವಿವಾಹೋಪಪ್ಲವಾದಿಷು |
ಸದ್ಯಶ್ಶೌಚಂ ಸಮಾಖ್ಯಾತಂ ಕಾಂತಾರಾಪದಿ ಸಂಯತಿ ||

ಸಂಗ್ರಹೇಪಿ :—

ಶ್ಲೋ || ಕೃಚ್ಛ್ರದೇವೋತ್ಸವ ಶ್ರಾದ್ಧ ದಾನಹೋಮ ತಪೋಧ್ವರೇ |
ಪ್ರಾರಬ್ಧೇ ತತ್ಪ್ರವೃತ್ತಾನಾಂ ಸದ್ಯಶ್ಶೌಚಮಘಾಗಮಃ | ಇತಿ |

ಅತ್ರ ಸದ್ಯಶ್ಶೌಚಶಬ್ದಸ್ಯ ತತ್ಕಾಲೇ ಸ್ನಾನಮಾತ್ರಮಿತ್ಯರ್ಥಃ | ಸ್ನಾನಂ ಚ ಶಾವವಿಷಯಂ | ನತು ಪ್ರಸವವಿಷಯುಂ | ಬ್ರಾಹ್ಮೇ—

ಶ್ಲೋ || ತಾವದ್ಗೃಹೀತದೀಕ್ಷಸ್ಯ ತ್ರೈವಿದ್ಯಸ್ಯ ಮಹಾಮಖೇ |
ಸ್ನಾನಂತ್ವವಭೃಥೇಯಾವ ತ್ತಾವತ್ತಸ್ಯ ನವಿದ್ಯತೇ ||
ಗೃಹೀತಮಧುಪರ್ಕಸ್ಯ ಯಜಮಾನಸ್ಯಚರ್ತ್ವಿಜಾಂ |
ಪಶ್ಚಾತ್ಪತಿತಮಾಶೌಚಂ ನಭವೇದಿತಿ ಸ್ಥಿತಿಃ ||
ಕುರ್ವತಾಂ ಯಾಜ್ಞಿಕಂ ಕರ್ಮ ಯಾಜಕಾನಾಂ ತಥೈವಚ |
ನಿಮಂತ್ರಿತೇಷು ವಿಪ್ರೇಷು ಪ್ರಾರಬ್ಧೇ ಶ್ರಾದ್ಧಕರ್ಮಣಿ ||
ನಿಮಂತ್ರಿತಸ್ಯ ವಿಪ್ರಸ್ಯ ಸ್ವಾಧ್ಯಾಯನಿರತಸ್ಯಚ |
ದೇಹೇ ಪಿತೃಷು ತಿಷ್ಠತ್ಸು ನಾಶೌಚಂ ವಿದ್ಯತೇಕ್ವಚಿತ್ ||

ಇತ್ಯಾದಿ ವಚನಾನಾಮರ್ಥಸಂಗ್ರಹಃ | ದೀಕ್ಷಾಗ್ರಹಣಾನಂತರಂ ದೀಕ್ಷಿತಸ್ಯ, ಸಂಕಲ್ಪಾನಂತರಮೃತ್ವಿಜಾಂ, ಮಧುಪರ್ಕಗ್ರಹಣಾನಂತರಂ ಆಶೌಚಂ ನಾಸ್ತಿ | ದೀಕ್ಷಿತಸ್ಯತು ಅವಭೃಥಪರ್ಯಂತಂ ಸ್ನಾನನಿಷೇಧಾತ್ ಮಂತ್ರಸ್ನಾನಮೇವ | ವಿವಾಹಾದೌ ನಾಂದೀಮುಖಾತ್ಪರಂ ಶೇಷಹೋಮಾಂತಂ, ಉಪನಯನೇ ಆಮೇಧಾಜನನಾಂತಂ ದಂಪತ್ಯೋರ್ವಟೋಶ್ಚ, ನಿಯಮವೇದಪಾರಾಯಣೇ ಪರಿಸಮಾಪ್ತಪರ್ಯಂತಂ ಜಪ್ತುಃ, ಆಶೌಚಾಭಾವಃ | ಸದ್ಯಸ್ನಾನಂ | ಅತ್ರವಿಶೇಷಃ | ವಿವಾಹೋಪನಯನಮಧ್ಯೇ ಪಿತ್ರೋಃ ದಂಪತ್ಯೋರ್ವಟೋರ್ವಾ ಮರಣೇ ತತ್ಕಾಲೇ ಕರ್ಮಶೇಷಂ ಸಮಾಪ್ಯ ಪಿತ್ರೋಃ ದಂಪತ್ಯೋರ್ವಟೋರ್ವಾ ದಹನಾದಿಕಂ ಕುರ್ಯಾತ್ | ದೀಕ್ಷಿತಸ್ಯ ದೀಕ್ಷಾಮಧ್ಯೇ ಮಾತಾಪಿತೃಮೃತಿವಿಷಯೇ ಸಂಸ್ಕಾರಮಾತ್ರಂ ಕೃತ್ವಾ ಶಾಲಾಮಾಗತ್ಯ ಯಜ್ಞಶೇಷಂ ಸಮಾ

ಪಯೋತ್ | ಸ್ನಾನಮಪಿನಾಸ್ತಿ | ದರ್ಭಪುಂಜೀಲೈಃ ದೀಕ್ಷಾವಿಧ್ಯುಕ್ತಮಂತ್ರೈಃ ಪಾವಯೇತ್ | ಕನಿಷ್ಠಭ್ರಾತೃಂತರ ಸದ್ಭಾವೇ ತೈಃ ಪಿತೃಕ್ರಿಯಾ ಕಾರ್ಯಾ | ಇತ್ಯೇಕಃಪಕ್ಷಃ | ಜ್ಯೇಷ್ಠಸ್ಸ್ವಯಮೇವ ಕುರ್ಯಾದಿತ್ಯೇಕಃಪಕ್ಷಃ |

ಟೀ || ಯಜ್ಞಕರ್ಮದಲ್ಲಿ ದೀಕ್ಷಾಸ್ವೀಕಾರಾನಂತರದಲ್ಲಿ ಯಜಮಾನನಿಗೂ ಮಧುಪರ್ಕಸ್ವೀಕಾರಾನಂತರ ಯಜಮಾನನ ಋತ್ವಿಕ್ಕುಗಳಿಗೂ ವಿವಾಹೋಪನಯನದಲ್ಲಿ ನಾಂದಿಯಾದ ನಂತರ ಕನ್ಯಾದಾತೃ ಪ್ರತಿಗೃಹೀತೃ ವಧೂವರರಿಗೂ ಆಚಾರ್ಯ ವಟುಗಳಿಗೂ ಆಯಾಯ ದೀಕ್ಷಾ ಪೂರ್ತಿಪರ್ಯಂತವೂ ಆಶೌಚವಿಲ್ಲವು. ಯಜ್ಞದೀಕ್ಷಾ ಮಧ್ಯದಲ್ಲಿ ಯಜಮಾನನಿಗೆ ಮಾತಾಪಿತೃ ಮೃತಿ ಸಂಭವಿಸಿದರೆ ತತ್ಕಾಲದಲ್ಲಿ ಅವರ ದಾಹಕಾರ್ಯವನ್ನು ಮಾಡಿ ಸ್ನಾನಕ್ಕೆ ಪ್ರತಿನಿಧಿಯಾಗಿ ದರ್ಭಪುಂಜೀಲದಿಂದ ವಿಧ್ಯುಕ್ತ ಮಂತ್ರಸ್ನಾನ ಮಾಡಿ ಯಜ್ಞಕರ್ಮವನ್ನು ಪೂರ್ತಿ ಮಾಡಬೇಕು. ದೀಕ್ಷಿತನಿಗೆ ಬೇರೆ ಭ್ರಾತೃಗಳಿದ್ದರೆ ಅವರಿಂದ ಮಾತಾಪಿತೃ ಕ್ರಿಯೆಯನ್ನು ಮಾಡಿಸಬೇಕೆಂದು ಒಂದುಪಕ್ಷವು. ಜ್ಯೇಷ್ಠನಾದರೆ ತಾನೇ ಮಾಡಬೇಕೆಂಬು ಒಂದುಪಕ್ಷವೂ ಇದೆ. ಮತ್ತು ವಿವಾಹೋಪನಯನ ದೀಕ್ಷಾಮಧ್ಯದಲ್ಲಿ ಮಾತಾಪಿತೃಗಳ ಮೃತಿಯಲ್ಲಿಯೂ, ದಂಪತೀ ವಟುಗಳ ಮೃತಿಯಲ್ಲಿಯೂ ಶೇಷಹೋಮಾಂತ ಮೇಧಾಜನನಾಂತ ಕರ್ಮವನ್ನು ತತ್ಕಾಲದಲ್ಲಿಯೇ ಪೂರ್ತಿ ಮಾಡಿ ಮೃತರಿಗೆ ದಾಹಾದಿಗಳನ್ನು ಮಾಡಬೇಕೆಂದು ಶತಕಕಾರ ವೈದ್ಯನಾಥಾದಿಗಳ ಮತವು. ವಿವಾಹದಲ್ಲಿ ಕನ್ಯಾದಾನಾಂತವಾಗಿ ದಾತೃ ಪ್ರತಿಗೃಹೀತೃಗಳಿಗೂ ಉಪನಯನದಲ್ಲಿ ಉಪದೇಶ ಭಿಕ್ಷಾದಾನಾಂತವಾಗಿ ವಟುವಿನ ತಂದೆತಾಯಿಗಳಿಗೂ ಆಶೌಚವಿಲ್ಲವೆಂದು ಶಿಷ್ಟಾಚಾರವಿದೆ.

ಮೂಲ:— ಪ್ರಜಾಪಾಲನ ನಿರತಸ್ಯ ರಾಜ್ಞಃ, ತತ್ಕಾರ್ಯಕರ್ತೃ ಶಿಲ್ಪಿದಾಸೀದಾಸಾನಾಂ ಅನನ್ಯಸಾಧ್ಯ ಮಂತ್ರ ಚಿಕಿತ್ಸಾದಿ ಕರ್ತೃ ಭಿಷಕ್ಪುರೋಹಿತಾದೀನಾಂ ಸದ್ಯಶ್ಶೌಚಂ | ಶಿಲ್ಪಿ ದಾಸಾದೀನಾಂ ಸ್ವಾಮಿಕರ್ಮಣ್ಯೇವ ಸದ್ಯಶ್ಶೌಚಂ | ಸ್ವಸ್ವಕರ್ಮಣ್ಯಧಿಕಾರಸ್ತು ಸ್ವಸ್ವಾಶೌಚ ಕಾಲಾಂತರಏವ |

ಟೀ || ರಾಜನಿಗೂ, ರಾಜಕಾರ್ಯನಿಯುಕ್ತರಿಗೂ, ಅನ್ಯರಿಂದ ಮಾಡಲಸಾಧ್ಯವಾದ ವೈದ್ಯಕರ್ಮ, ಪುರೋಹಿತಾದಿಗಳಿಗೂ, ನಾಪಿತರಿಗೂ ಸ್ವಾಮಿಕಾರ್ಯ ನಡೆಸುವ ವಿಷಯದಲ್ಲಿ ಮಾತ್ರ ಸದ್ಯಶ್ಶುದ್ಧಿಯೇ ಹೊರತು ಸ್ವಕರ್ಮಾಧಿಕಾರಕ್ಕೆ ತಮ್ಮ ಆಶೌಚಾಂತದಲ್ಲೇ ಶುದ್ಧಿಯು. ಯುದ್ಧದಲ್ಲಿ ಮೃತರಾದವರ ಜ್ಞಾತ್ಯಾ

ದಿಗಳಿಗೂ ಸದ್ಯಶ್ಶುದ್ಧಿ, ಸದ್ಯಸ್ಸಂಸ್ಕಾರವು. ಯುದ್ಧಕ್ಷತನಾಗಿ ಕಾಲಾಂತರದಲ್ಲಿ ಮೃತನಾದರೆ ಒಂದುದಿನಾಶೌಚವು. ಗೋ ಬ್ರಾಹ್ಮಣ ಸ್ತ್ರೀ ಮೊದಲಾದ ಪ್ರಾಣಿ ರಕ್ಷಣಾರ್ಥವಾಗಿ ಮೃತರಾದರೂ ವಿಧ್ಯುಕ್ತ ನಿರಶನವ್ರತ ಪ್ರಾಯೋಪವೇಶನಾದಿ ಗಳಿಂದ ಮೃತರಾದರೂ ತದ್ಬಂಧುಗಳಿಗೆ ಸದ್ಯಶ್ಶುದ್ಧಿಯು. ಸದ್ಯಸ್ಸಂಸ್ಕಾರವು. ಅನ್ವಕ್ಷಾಶೌಚವೆಂದು ಇದೆ. ಅನ್ವಕ್ಷವೆಂದರೆ ಮೃತಶರೀರವಿರುವವರೆಗೂ ಅಶೌ ಚವು. ಸಂಸ್ಕಾರಾನಂತರ ಸ್ನಾನದಿಂದ ಶುದ್ಧಿಯು.

## ॥ ಚಂದ್ರಸೂರ್ಯೋಪರಾಗವಿಷಯೇ ಜಾತಕರ್ಮಾದೌ ॥

ಚಂದ್ರಸೂರ್ಯೋಪರಾಗೇ ಯಾವನ್ಮೋಚನಂ ತಾವಚ್ಛ್ರಾದ್ಧದಾನಾದೌ ಸ್ನಾನಾಚ್ಛುದ್ಧಿಃ । ತಥಾ ಪುತ್ರಜನ್ಮನಿಚ ನಾಂದೀಶ್ರಾದ್ಧದಾನಾದೌ ಆಪದಿ ಪ್ರಾಯಶ್ಚಿತ್ತೇ ತೀರ್ಥಯಾತ್ರಾಯಾಂ ವೇದಪಾರಾಯಣೇ ವ್ರತೇ ನಾಮ ಕರ್ಮಾದಿ ಸಂಸ್ಕಾರೇ ಪ್ರಾರಬ್ಧೇ ಸದ್ಯಶ್ಶೌಚಂ । ಆಶೌಚೇ ಪ್ರಾಣೋತ್ಕ್ರಮಣ ಸಮಯೇ ದಾನಾದೌ ಸದ್ಯಶ್ಶುದ್ಧಿಃ ।

ಟೀ ॥ ಚಂದ್ರಸೂರ್ಯ ಗ್ರಹಣಕಾಲದಲ್ಲಿ ಗ್ರಹಣ ಮೋಕ್ಷ ಪರ್ಯಂತರವೂ ಶ್ರಾದ್ಧ ದಾನಾದಿಗಳನ್ನು ಮಾಡುವುದಕ್ಕೆ ಸ್ನಾನಾನಂತರ ಸದ್ಯಶ್ಶುದ್ಧಿಯು ಪುತ್ರಜನನದಲ್ಲೂ ತತ್ಕಾಲ ಸ್ನಾನಾನಂತರ ಜಾತಕರ್ಮಾದಿಗಳಲ್ಲೂ ತತ್ಕಾಲೀನ ದಾನದಲ್ಲೂ ಆಪತ್ಕಾಲದಲ್ಲಿ ಸರ್ವಪ್ರಾಯಶ್ಚಿತ್ತಾದಿಗಳಿಗೂ ದಾನಮಾಡುವುದಕ್ಕೂ ತತ್ಕಾಲಶುದ್ಧಿಯು. ತೀರ್ಥಶ್ರಾದ್ಧಾದಿ ಕಾಲದಲ್ಲೂ, ನಿಯಮಾರ್ಥವಾದ ವೇದ ಪಾರಾಯಣದಲ್ಲೂ, ವ್ರತ ನಾಮಕರಣಾದಿ ಸಂಸ್ಕಾರದಲ್ಲೂ ಕ್ರಿಯಾರಂಭವಾದ ಮೇಲೆ ಕರ್ಮಪೂರ್ತಿ ಪರ್ಯಂತವೂ ಸದ್ಯಶ್ಶುದ್ಧಿಯು ಎಂದರೆ ಕರ್ಮ ಪೂರ್ತಿಯಾದ ನಂತರ ಬಾಕಿ ಮಿಕ್ಕಿರತಕ್ಕ ಆಶೌಚವನ್ನು ಅನುಷ್ಠಾನ ಮಾಡಬೇಕು. ಕರ್ಮಕಾಲ ದಲ್ಲಿ ಮಾತ್ರ ತಾತ್ಕಾಲಿಕ ಶುದ್ಧಿಯೆಂದು ತಾತ್ಪರ್ಯವು. ಆಪತ್ಸನ್ಯಾಸವನ್ನು ಮಾಡಬಹುದೆಂದು ನಿರ್ಣಯಸಿಂಧುಕಾರರ ಮತವು.

## ॥ ಅಥೋನಿಯಮಃ—ಆಶೌಚೇ ವರ್ಜ್ಯಕರ್ಮಾಣಿ ॥

ಅಥೇ ದೇವಾಲಯ ಪ್ರವೇಶ ಗುರ್ವಾದಿವಂದನ ಪುಷ್ಪಸಮಿದ್ದರ್ಭಾದ್ಯಾ ಹರಣ ಪೂಜೋಪಕರಣ ಗೃಹಭಾಂಡಾದಿ ಸ್ಪರ್ಶನ ಪರಾನ್ನಭೋಜನ ಖಟ್ವಾ ಶಯನ ಗಂಧತಾಂಬೂಲಾದ್ಯಲಂಕರಣ ಅನ್ಯಾಶೌಚಿಸ್ಪರ್ಶನಾನಿಚ ವರ್ಜಯೇತ್ । ತೈಲಾಭ್ಯಂಗ ಸರುತುಗಮನಾತಿಥಿಪೂಜಾದಿಚ ವರ್ಜಯೇತ್ । ಶಾವೇ ಸೂತಕೇಚ

ಶ್ರೌತಸ್ಮಾರ್ತಕರ್ಮಣಾಂ ತ್ಯಾಗಃ | ದ್ರವ್ಯಾಣ್ಯಪಿ ದುಷ್ಯಂತಿ | ಸಂಧ್ಯಾಕರ್ಮ ಮನಸಾ ಕುರ್ಯಾತ್ | ಅರ್ಘ್ಯದಾನಮಾತ್ರಂ ಮಂತ್ರೋಚ್ಚಾರಣಪೂರ್ವಕಂ ಕುರ್ಯಾತ್ | ಪ್ರಾಣಾಯಾಮಂ ಮಂತ್ರವರ್ಜ್ಯಮೇವ ಕುರ್ಯಾತ್ | ಗಾಯತ್ರೀಂ ತಿಷ್ಠನ್ ದಶಕೃತ್ವ ಉಪಾಂಶುಜಪೇತ್ | ನಸೂರ್ಯೋಪಸ್ಥಾನಮಿತಿ ವೈದ್ಯನಾಥೋಕ್ತಿಃ | ಸಾಯಂಪ್ರಾತಃ ಸ್ನಾನಪೂರ್ವಕಮಗ್ನಿಹೋತ್ರಂ ಆರ್ದ್ರವಾಸಾಸ್ಸ್ವಯಮೇವ ಕುರ್ಯಾತ್ | ನತ್ವಿಷ್ಟಿ ಪಶುಬಂಧಾದಿ | ಔಪಾಸನಮನ್ಯೇನ ಕಾರಯೇತ್ | ನಸ್ವಯಂ ಕುರ್ಯಾತ್ | ಅನ್ಯದ್ವೈಶ್ವದೇವಾದಿಕಂ ಶ್ರೌತಂ ಸ್ಮಾರ್ತಂ ವಾ ಕರ್ಮ ನಕುರ್ಯಾನ್ನಚಕಾರಯೇತ್ | ಶಾವಸೂತಕಯೋರ್ನದಾನಪ್ರತಿಗ್ರಹೌ | ಜಾತಕರ್ಮ ಪ್ರೇತಕ್ರಿಯಾದಿಕಾಲೇ ಕರ್ಮಾಂಗದಾನಂ ಕುರ್ಯಾನ್ಮಂತ್ರಮುಪ್ಯುಚ್ಚರೇತ್ | ದುರ್ಭಿಕ್ಷೇ ಏಕಕಾಲಪರ್ಯಾಪ್ತಮಾಮದ್ರವ್ಯಂ ಆಶೌಚಿಭ್ಯಃ ಪ್ರತಿಗ್ರಾಹ್ಯಂ | ಆಶೌಚಿಗೃಹೇಭ್ಯಃ ದಧಿ. ಕ್ಷೀರ, ಘೃತ, ಶಾಕ, ಲವಣ, ಪುಷ್ಪ, ತಿಲೌಷಧ, ಕಾಷ್ಠ, ಮೂಲ, ಫಲ, ಮಧು, ಮಾಂಸ, ಕೂಪೋದಕ, ಕೃಷ್ಣಾಜಿನ, ಪಣ್ಯವಿಕ್ರೇಯ, ದ್ರವ್ಯಾಣಾಂ ಪಕ್ವಾಪೂಪಾನಾಂಚ ಗ್ರಹಣೇ ನದೋಷಃ | ಪಕ್ವಾಪೂಪಂ ಅನ್ನಸತ್ರಾದೇವ ನಾನ್ಯತ್ರ | ಆಶೌಚಿ ಸತ್ರಾನ್ನಭೋಜನೇ ತ್ರಿರಾತ್ರಂ ಪಯಃ ಪಾನಮಿತಿ ವೈದ್ಯನಾಥಃ | ಅಘೇ ಧೀಪೂರ್ವಂ ಭೋಕ್ತುರ್ದಶಾಹಮಾಶೌಚಂ || ತದಂತೇ ಚಾಂದ್ರಾಯಣಾಚ್ಛುದ್ಧಿಃ | ಮೋಹಾದ್ಭೋಕ್ತುರ್ಭುಕ್ತಂ ಜೀರ್ಣಂಯಾವದಧಃಪತತಿ ತಾವದಘಂ | ಗುರುದ್ರವ್ಯಾಶನೇ ಸಪ್ತರಾತ್ರಂ | ಲಘುದ್ರವ್ಯಾಶನೇ ತ್ರಿರಾತ್ರಂ | ಆಪತ್ಸ್ವಹೋರಾತ್ರಮಾಶೌಚಂ | ದಾತುರ್ಭೋಕ್ತುರುಭಯೋರಪ್ಯಾಶೌಚಾಜ್ಞಾನೇ ಭೋಜನೇ ನದೋಷಃ | ಅನ್ನಸತ್ರದಾತುರಘಸತ್ವೇಪಿ ಸತ್ರಾನ್ನಭೋಜನಾದೌ ನದೋಷ ಇತಿ ಷಡಶೀತೌ || ಅಘಿಗೃಹೇ ಭೋಜನಾದೌ ಸಪಿಂಡಾನಾಂ ನದೋಷಃ | ಆಶೌಚಮಧ್ಯೇ ಮಾತಾಪಿತೃ ಸಾಂವತ್ಸರಿಕ ಶ್ರಾದ್ಧಾದಿ ನಕುರ್ಯಾತ್ || ಚಂದ್ರಸೂರ್ಯೋಪರಾಗಯೋಃ ಸಚೇಲಮವಗಾಹ್ಯ ಜಲಮಧ್ಯೇ ತಿಷ್ಠನ್ ಪಿತೄನುದ್ದಿಶ್ಯ ಉಪರಾಗನಿಮಿತ್ತಕ ತರ್ಪಣಂ ಕುರ್ಯಾತ್ | ಆಶೌಚಂ ಕ್ಷೌರಂ ಯೇಷಾಂ ವಿಧಿಪ್ರಾಪ್ತಂ ತೇಷಾಮೇವ ವಿಹಿತಂ ನಾನ್ಯೇಷಾಂ |

**ಟೀ||** ಆಶೌಚಿಯು ದೇವಾಲಯಪ್ರವೇಶ, ನಮಸ್ಕಾರ, ಪುಷ್ಪಸಮುದ್ಧಭಾರಾದಿಗಳನ್ನು ತರುವುದು, ಪೂಜೋಪಯುಕ್ತದ್ರವ್ಯ ಗೃಹದ ಮಣ್ಣಿನಪಾತ್ರಾದಿಗಳ

ಸ್ಪರ್ಶ, ಪರಾನ್ನಭೋಜನ, ಮಂಚಾದಿಗಳಲ್ಲಿ ಮಲಗುವುದು, ತಾಂಬೂಲ ಗಂಧ ಪುಷ್ಪಾದಿಸೇವನ, ಋತುಕಾಲತ್ವೇನ ವಿಹಿತವಾದ ಪತ್ನೀಗಮನ, ತೈಲಾಭ್ಯಂಗ, ಭಿನ್ನಾಶೌಚಿಗಳನ್ನು ಮುಟ್ಟುವುದು, ಅತಿಥಿಪೂಜಾದಿಗಳು, ಇವುಗಳನ್ನು ಬಿಡ ಬೇಕು. ಜನನಮರಣಾಶೌಚಗಳಲ್ಲಿ ಕರ್ಮಗಳಿಗೆ ತ್ಯಾಗವುಂಟು. ಆಶೌಚಿಯ ದ್ರವ್ಯಗ ಳಿಗೂ ದೂಷ್ಯತ್ವವಿದೆ. ಅದು ಯಾವುದೆಂದರೆ:—ಸಾಯಂಪ್ರಾತಃ ಸಂಧ್ಯಾವಂ ದನವನ್ನು ಮನಸಾ ಮಂತ್ರವನ್ನುಚ್ಚರಿಸಿ ಮಾಡಬೇಕು. ಅರ್ಘ್ಯಪ್ರದಾನವನ್ನು ಮಾತ್ರ ಉಪಾಂಶುಮಂತ್ರೋಚ್ಚಾರಣ ಪೂರ್ವಕಮಾಡಬೇಕು. ಗಾಯತ್ರೀ ಮಂ ತ್ರವನ್ನು ನಿಂತುಕೊಂಡು ಉಪಾಂಶುವಾಗಿ ಹತ್ತು ಜಪವನ್ನು ಮಾಡಬೇಕು.

ಸಾಯಂಪ್ರಾತಃ ಸ್ನಾನಪೂರ್ವಕವಾಗಿ ಶ್ರೌತಾಗ್ನಿಹೋತ್ರವನ್ನು ತಾನೇ ಮಾಡಬೇಕು. ಇಷ್ಟಿ ಪಶುಬಂಧಾದಿಗಳನ್ನು ಮಾಡಕೂಡದು. ಔಪಾಸನವನ್ನು ಅನ್ಯರಿಂದ ಮಾಡಿಸಬೇಕು. ತಾನು ಮಾಡಕೂಡದು. ವೈಶ್ವದೇವಾದಿ ಬಾಕೀ ಶ್ರೌತಸ್ಮಾರ್ತಕರ್ಮಗಳು ಯಾವುದನ್ನೂ ಮಾಡಕೂಡದು. ತಾನು ಯಾಜಕನಾಗಿ ಅನ್ಯರಿಂದ ಮಾಡಿಸಲೂಕೂಡದು. ದಾನ ಪ್ರತಿಗ್ರಹ ಎರಡನ್ನೂ ಬಿಡಬೇಕು. ಆದರೆ ಜಾತಕರ್ಮದಲ್ಲಿ ಮಂತ್ರೋಚ್ಚಾರಣೆಯನ್ನೂ ತತ್ಕಾಲಕರ್ತವ್ಯ ದಾನಾದಿಗ ಳನ್ನೂ ಪಿತ್ರಾದಿಕ್ರಿಯಾಮಾಡುವ ಕಾಲಗಳಲ್ಲಿ ತದುಪಯುಕ್ತ ಮಂತ್ರೋಚ್ಚಾರಣೆ ಯನ್ನೂ ತದುಕ್ತ ದಾನಗಳನ್ನೂ ಮಾತ್ರ ಮಾಡಬಹುದು. ದುರ್ಭಿಕ್ಷಕಾಲದಲ್ಲಿ ಒಂದುಹೊತ್ತಿನ ಭೋಜನಕ್ಕೆ ಸಾಕಾದಷ್ಟು ಅಕ್ಕಿ ಮೊದಲಾದ ಅಪಕ್ವದ್ರವ್ಯ ವನ್ನು ಮಾತ್ರ ಸೂತಕಿಗಳ ದೆಸೆಯಿಂದ ತೆಗೆದುಕೊಳ್ಳಬಹುದು. ಆಶೌಚಿಗಳ ಮನೆ ಯಲ್ಲಿ ಹಾಲು, ಮೊಸರು, ತುಪ್ಪ, ಉಪ್ಪು, ಶಾಕಗಳು, ಪುಷ್ಪ, ಎಳ್ಳು, ಔಷಧ, ಸೌದೆ, ಗೆಣಸು, ಗೆಡ್ಡೆ, ಫಲ, (ಮಾಂಸ, ಮಧು,) ಬಾವಿಯ ನೀರು, ಕೃಷ್ಣಾ ಜಿನ, ಅಂಗಡಿಗಳಲ್ಲಿ ಮಾರತಕ್ಕ ದ್ರವ್ಯಗಳು ಇವುಗಳನ್ನು ತೆಗೆದುಕೊಂಡರೆ ದೋಷ ವಿಲ್ಲ. ಬುದ್ಧಿಪೂರ್ವಕ ಸೂತಕಿಯ ಪಕ್ವಾನ್ನವನ್ನು ಭೋಜನಮಾಡಿದರೆ ಹತ್ತು ದಿನಾಶೌಚವಿದ್ದು ಅನಂತರ ಚಾಂದ್ರಾಯಣ ಕೃಚ್ಛ್ರವನ್ನು ಮಾಡಬೇಕು. ಮೋಹ ದಿಂದ ಸೂತಕಾನ್ನಭೋಜನಮಾಡಿದರೆ ತಿಂದ ಅನ್ನವು ಜೀರ್ಣವಾಗಿ ಅಧಃಪತನವಾ ಗುವ ವರೆಗೂ ಆಶೌಚವು. ಗುರುಪದಾರ್ಥ ಭೋಜನಮಾಡಿದರೆ ಏಳುದಿನವು, ಲಘುಪದಾರ್ಥ ಭೋಜನಮಾಡಿದರೆ ಮೂರುದಿನವು. ಆಪತ್ಕಾಲದಲ್ಲಿ ಭೋಜನ ಮಾಡಿದರೆ ಒಂದುದಿನ ಆಶೌಚವು. ದಾತೃ ಭೋಕ್ತೃ ಇಬ್ಬರಿಗೂ ಆಶೌಚವು.

ತಿಳಿಯದೇ ಇದ್ದರೆ ದೋಷವಿಲ್ಲ. ಅನ್ನಸತ್ರದ ಯಜಮಾನನಿಗೆ ಆಶೌಚವಿದ್ದರೂ ಸತ್ರಾನ್ನಭೋಜನಕ್ಕೆ ದೋಷವಿಲ್ಲ. ಆಶೌಚಿಗಳಾದ ಜ್ಞಾತಿಗಳಿಗೆ ಜ್ಞಾತಿಗಳ ಅನ್ನಭೋಜನಾದಿಗಳಲ್ಲಿ ದೋಷವಿಲ್ಲ. ಆಶೌಚಮಧ್ಯದಲ್ಲಿ ಪಿತ್ರಾದಿ ಸಾಂವತ್ಸರಿಕ ಶ್ರಾದ್ಧಾದಿಗಳನ್ನು ಬಿಡಬೇಕು. ಚಂದ್ರಸೂರ್ಯಗ್ರಹಣದಲ್ಲಿ ಮಾತ್ರ ಸಚೇಲಸ್ನಾನಮಾಡಿ (ಜಲಮಧ್ಯೆ ನಿಂತುಕೊಂಡು) ಗ್ರಹಣನಿಮಿತ್ತ ಪಿತೃತರ್ಪಣವನ್ನು ಮಾಡಬಹುದು. ಜನನಾಶೌಚದಲ್ಲಿ ಹುಟ್ಟಿದಮಗುವಿನ ತಂದೆಯು ಹತ್ತನೇದಿನ ಕ್ಷೌರಮಾಡಿಸಿಕೊಳ್ಳಬೇಕು. ಮರಣಾಶೌಚದಲ್ಲಿ ಯಾರಿಗೆ ಕ್ಷೌರವು ಶಾಸ್ತ್ರವಿಹಿತವಾಗಿ ಬರುತ್ತದೆಯೋ ಅವರುಮಾತ್ರ ಉಕ್ತಕಾಲದಲ್ಲಿ ಮಾಡಿಸಿಕೊಳ್ಳಬಹುದು ಇತರರು ಆಶೌಚದಲ್ಲಿ ಕ್ಷೌರಮಾಡಿಸಿಕೊಳ್ಳಕೂಡದು.

ಇತಿ ಸಪಿಂಡಾಶೌಚನಿರ್ಣಯಃ



## ॥ ಅಥ ಸಂಪರ್ಕಾಶೌಚಂ ॥

ಸಂಪರ್ಕಾಶೌಚೇ ಪುರುಷಸ್ಯ ಪ್ರಾಪ್ತೇಪಿ, ತತ್ಪತ್ನ್ಯಾಃ, ಗೃಹಾದಿದ್ರವ್ಯಾಣಾಂಚ ನಾಸ್ತಿ । ಕಿಂಚ ಅತಿಕ್ರಾಂತಾಶೌಚ ಮನುಷ್ಯಾತು ರ್ಯಜಮಾನಸ್ಯ ಗೃಹದ್ರವ್ಯಾಣಾಂ ಗೃಹಸ್ಯಚ ನಾಶೌಚಂ । ಪತ್ನ್ಯಾಸ್ತು ಪೂರ್ವಮಾಶೌಚ ಗ್ರಹಣಾಭಾವೇ ಪತ್ಯುಃಪ್ರಾಪ್ತಮಸ್ತಿ । ಗೃಹೀತಾಶೌಚಾಯಾಸ್ತು ನಪುನಃ ಪತ್ಯುಃಪ್ರಾಪ್ತಮಘಂ । ಶವಸ್ಯವಾಸಸ್ಸ್ರಗ್ಗಂಧ ಭೂಷಣಾದ್ಯಲಂಕರಣೇ ವಹನೇಚ ಸಮಾನೋದಕಾನಾಂ ದಶಾಹಮಾಶೌಚಂ । ವಹನಾದ್ಯನ್ಯತಮ ಕೃತ್ಯಮಾತ್ರಕರಣೇಪಿ ದಶರಾತ್ರಂ । ಸಮಾನೋದಕಸ್ಯ ಕ್ರಿಯಾಕರಣೇ ದಶಾಹಮೇವ ಕ್ರಿಯಾಚ। ಏವಮನುಪನೀತ ಜ್ಞಾತಿಶವ ನಿರ್ಹಾರೇ ಜ್ಞಾತೀನಾಂ ದಶಾಹಮಾಶೌಚಂ । ಅನುಪನೀತ ಸಮಾನೋದಕ ಶವನಿರ್ಹಾರೇ ಸಮಾನೋದಕಸ್ಯ ತ್ರ್ಯಹಂ । ಏವಂ ಪಕ್ಷಿಣ್ಯಾಶೌಚಿಷು ಶವನಿರ್ಹಾರೇ ತ್ರ್ಯಹಂ । ಏಕಾಹಾಶೌಚಿನಾಮಪಿ ಶವನಿರ್ಹಾರೇ ತ್ರ್ಯಹಂ ।

ಶ್ಲೋ ॥ ಯಸ್ಸಮಾನೋದಕಂಪ್ರೇತಂ ವಹೇದ್ವಾಥ ದಹೇತ್ತದಾ ।
ತಸ್ಯಾಶೌಚಂ ದಶಾಹಾಂತ ಮನ್ಯೇಷಾಂತು ತ್ರ್ಯಹಂವಿದುಃ ।
ಇತಿ ದೇವಲಾದಿಸ್ಮರಣಾತ್ । ಇತಿಪಡಶೀತಾ ।

ಸ್ಮೃತಿಮುಕ್ತಾಫಲೇಭರದ್ವಾಜಃ ||

ಶ್ಲೋ || ಯಸ್ಸಮಾನೋದಕಂಪ್ರೇತಂ ವಹೇದ್ವಾತು ದಹೇತ್ತುವಾ |
ತಸ್ಯಾಶೌಚಂದಶಾಹಂಸ್ಯಾ ದನ್ಯೇಷಾಂತು ತ್ರ್ಯಹಂವಿದುರಿತಿ |
ಅನ್ಯೇಷಾಂ ಯೋನಿಬಂಧೂನಾಂ | ತಥಾಚಶಂಖಃ ||

ಶ್ಲೋ || ತ್ರ್ಯಹಂತು ಯೋನಿಬಂಧೂನಾ ಮಾಶೌಚಂ ವಹನಾದಿಷು |
ಇತ್ಯಾದಿದ್ರಷ್ಟವ್ಯಂ| ವಿಜಾತಿಶವ ನಿರ್ಹಾರೇ ತಜ್ಜಾತ್ಯುಕ್ತಮಾಶೌಚಂ| ಧನಾರ್ಥಂ ಶವನಿರ್ಹಾರೇ ತತ್ತಜ್ಜಾತ್ಯುಕ್ತ ದ್ವಿಗುಣಮಾಶೌಚಂ ||

ಟೀ || ಶವಕ್ಕೆ ಅಲಂಕಾರಾದಿಗಳನ್ನಾಗಲೀ ಶವವಹನವನ್ನಾಗಲೀ ಸಮಾನೋದಕರು ಮಾಡಿದರೆ ಅವರಿಗೆ ದಶಾಹಾಶೌಚವು. ಸಮಾನೋದಕನಿಗೆ ಕ್ರಿಯಾ ಮಾಡಿದರೂ ದಶಾಹದಲ್ಲೇ ಕ್ರಿಯಾಸಮಾಪ್ತಿಯೂ ಆಶೌಚವೂ ಸಹ. ಇದೇ ಪ್ರಕಾರ ಅನುಪನೀತಜ್ಞಾತಿ ಶವವಹನಮಾಡಿದ ಜ್ಞಾತಿಗೆ ದಶಾಹಾಶೌಚವು. ಪಕ್ಷಿಣ್ಯಾಶೌಚಿಯು ಶವನಿರ್ಹಾರಮಾಡಿದರೆ ಮೂರುದಿನಾಶೌಚವು. ವಿಜಾತಿಶವ ನಿರ್ಹಾರಮಾಡಿದರೆ ಶವಜಾತ್ಯುಕ್ತಾಶೌಚವು. ಧನಾರ್ಥವಾಗಿ ಶವನಿರ್ಹಾರಮಾಡಿದರೆ ಶವಜಾತ್ಯುಕ್ತಾಶೌಚಕ್ಕೆ ಎರಡರಷ್ಟು ಕಾಲಆಶೌಚವು

## || ಕೇವಲ ಶವನಿರ್ಹಾರೇ ||

ಆಶೌಚರಹಿತಃ ಪ್ರಮೀತಮಲಂಕುರ್ಯಾ ದ್ವಹೇ ದ್ದಹೇದ್ವಾ ಕಾಲಶೇಷಂ ಬಹಿರ್ವಸನ್ ಶುಧ್ಯತಿ | ಗ್ರಾಮೇ ವಸನ್ನೇಕದಿನಾಚ್ಛುಧ್ಯತಿ| ಪ್ರೇತಗೃಹೇ ವಸನ್ ತ್ರಿರಾತ್ರಾಚ್ಛುದ್ಧ್ಯತಿ | ತದನ್ನಭೋಜನಂ ಕುರ್ವನ್ ದಶಾಹೇನ ಶುಧ್ಯತಿ | ತದಂತೇ ಚಾಂದ್ರಾಯಣಂ ಪ್ರಾಯಶ್ಚಿತ್ತಂ | ಭೋಜನಾಕರಣೇ ಪಾದಕೃಚ್ಛ್ರಂ | ಅಜ್ಞಾನಾತ್ಸ್ಪರ್ಶನೇ ಉಪವಾಸಃ | ರುಷ್ಣವಿಷಯೇ ಸ್ನಾನಮಾತ್ರಂ | ಯಸ್ಮಿನ್ ಯಸ್ಮಿನ್ ದಿನೇ ಆಶೌಚಿಭಿಸ್ಸಹ ಸಂಪರ್ಕಃ ತತ್ತದ್ದಿನಮಾತ್ರಮಘಂ | ಕದಾಚಿತ್ ಸ್ಪರ್ಶೇ ಸ್ನಾನಮೇವ ||

ಟೀ || ಆಶೌಚವಿಲ್ಲದ ಅಸಪಿಂಡರು ಶವಾಲಂಕಾರ ವಹನ ದಹನಗಳಲ್ಲಿ ಯಾವುದನ್ನು ಮಾಡಿದರೂ ಒಂದುಹೊತ್ತು ಗ್ರಾಮದ ಹೊರಗೆ ವಾಸಮಾಡಿ ಸ್ನಾನಾದಿಗಳಿಂದ ಶುದ್ಧರಾಗುತ್ತಾರೆ. ಗ್ರಾಮದಲ್ಲಿ ವಾಸಮಾಡಿದರೆ ಒಂದು ದಿನಾಶೌಚವು. ಪ್ರೇತಗೃಹದಲ್ಲಿ ವಾಸಮಾಡಿದರೆ ಮೂರು ದಿನಾಶೌಚವು. ಅಲ್ಲೇ ಭೋಜನವನ್ನೂ ಮಾಡಿದರೆ ಹತ್ತುದಿನಾಶೌಚವೂ ಅನಂತರ ಚಾಂದ್ರಾಯಣ

ಪ್ರಾಯಶ್ಚಿತ್ತವೂ ಭೋಜನವಿಲ್ಲದೆ ವಾಸಮಾಡಿದರೆ ಪಾದಕೃಚ್ಛ್ರವು. ಅಜ್ಞಾನದಿಂದ ಶವಸ್ಪರ್ಶಮಾಡಿದರೆ ಒಂದುಹೊತ್ತು ಉಪವಾಸವು. ವ್ಯಾಧಿಗ್ರಸ್ತರು ಆಶಾಚಿಗಳನ್ನು ಸ್ಪರ್ಶಮಾಡಿದರೆ ಸ್ನಾನಮಾತ್ರವು ಯಾವ ಯಾವ ದಿನದಲ್ಲಿ ಆಶೌಚಿ ಸಂಪರ್ಕವೋ ಆಯಾಯ ದಿನಮಾತ್ರ ಆಶೌಚವು. ಕದಾಚಿತ್ ಪ್ರಮಾದದಿಂದ ಮುಟ್ಟಿದರೆ ಸ್ನಾನಮಾತ್ರದಿಂದ ಶುದ್ಧಿಯು ||

|| ಶ್ರೋತ್ರಿಯಾದಿ ಮೃತೌಯಃ ನಿರ್ಹಾರೇ ಫಲಂಚ ||

ಶ್ರೋತ್ರಿಯಮೃತೌ ಶವನಿರ್ಹಾರಾಭಾವೇಪಿ ಗ್ರಾಮವಾಸಿಜನಸ್ಯ ದಿನಂ | ಅಶ್ರೋತ್ರಿಯಮೃತೌ ನಿರ್ಹಾರಾಭಾವೇ ತದ್ಗೃಹವಾಸಿನೋಪ್ಯನ್ಯಸ್ಯ ನಕಿಂಚಿದಾಶೌಚಂ | ಗೃಹೇ ಕ್ರಿಯಾದಿಕರಣಪಕ್ಷೇ ತದ್ಗೃಹಂತ್ಯಜೇತ್| ಯತ್ಯನಾಥ ಬ್ರಹ್ಮವಿನ್ನಿರ್ಹಾರೇ ಸದ್ಯಶ್ಶುದ್ಧಿ ರ್ಮಹಾಫಲಂಚ ||

ಟೀ || ಶ್ರೋತ್ರಿಯರ ಮರಣದಲ್ಲಿ ಶವನಿರ್ಹಾರ ಮಾಡದೇಇದ್ದರೂ ಗ್ರಾಮವಾಸಿಜನಕ್ಕೆ ಒಂದುದಿನಾಶೌಚವು. ಅಶ್ರೋತ್ರಿಯರ ಮರಣದಲ್ಲಿ ಶವನಿರ್ಹಾರ ಮಾಡದೆಇದ್ದಪಕ್ಷ ಆಗೃಹದಲ್ಲಿ ವಾಸಮಾಡುವ ಅಸಪಿಂಡಾದಿಗಳಿಗೆ ಆಶೌಚವಿಲ್ಲ. ಶವನಿರ್ಗಮನ ಪರ್ಯಂತ ಗೃಹಾಶೌಚಮಾತ್ರ. ಆ ಗೃಹದಲ್ಲಿ ಕ್ರಿಯಾದಿಗಳನ್ನು ಮಾಡುವಪಕ್ಷೆ, ಅನ್ಯರು ಆ ಗೃಹವಾಸವನ್ನು ಬಿಡಬೇಕು. ಸನ್ಯಾಸಿಗಳು ಬ್ರಹ್ಮವಿತ್ತುಗಳು ಅನಾಥರು ಇವರ ಶವನಿರ್ಹಾರಮಾಡಿದರೆ ಸದ್ಯಶ್ಶುದ್ಧಿಯೂ ಮಹಾಫಲವೂ ಸಹ.

ಶ್ಲೋ || ಮಿತ್ರ ಬಂಧು ಸುಹೃತ್ಪುತ್ರ ಧನಧಾನ್ಯಗೃಹೋಜ್ಝಿತಂ |
ಅನಾಥಬ್ರಾಹ್ಮಣಂ ಪ್ರೇತಂ ಯೇವಹಂತಿ ದ್ವಿಜಾತಯಃ |
ಪದೇಪದೇ ಯಜ್ಞಫಲಂ ಆನುಪೂರ್ವ್ಯಾಲ್ಲಂಭಂತಿತೇ |
ನತೇಷಾಮಶುಭಂ ಕಿಂಚಿ ತ್ಪಾಪಂವಾ ಶುಭಕರ್ಮಣಾಂ |
ಜಲಾವಗಾಹನಾತ್ತೇಷಾಂ ಸದ್ಯಶ್ಶೌಚಂ ವಿಧೀಯತೇ ||

|| ಅನುಗಮನಾಶೌಚಂ ||

ಶವಾನುಗಮನೇ ರೋದನೇವಾ ಕೃತೇ ತಸ್ಮಿನ್ನೇವದಿನೇ ಶ್ರಾದ್ಧ ಜಪಹೋಮಾದಿ ಕರ್ಮ ನಕುರ್ಯಾತ್ | ತದ್ದೋಷಾಪನೋದಕ ಪ್ರಾಯಶ್ಚಿತ್ತೇ ಕೃತೇ ಸತಿ ಕರ್ತವ್ಯಮೇವ | ಶ್ರಾದ್ಧಭೋಜನಮಾತ್ರಂ ನಕರ್ತವ್ಯಂ | ಬ್ರಾಹ್ಮಣಸ್ಯ ಸ್ವವರ್ಣ ಶವಾನುಗಮನೇ ಸ್ನಾನ ವಹ್ನಿಸ್ಪರ್ಶ ಆಜ್ಯಪ್ರಾಶನ ಪುನಸ್ಸ್ನಾನೈಃ ಶುದ್ಧಿಃ|

ಟೀ || ಶವವನ್ನನುಸರಿಸಿ ಸ್ಮಶಾನಕ್ಕೆ ಹೋದರೂ ರೋದನಮಾಡಿದರೂ ಆ ದಿನದಲ್ಲಿ ಶ್ರಾದ್ಧಾನ್ನಭೋಜನ ಜಪ ಹೋಮಾದಿ ಕರ್ಮವನ್ನು ಮಾಡಕೂಡದು. ತದ್ದೋಷಶಾಂತ್ಯರ್ಥವಾಗಿ ಮುಂದೆ ಹೇಳುವ ಪ್ರಾಯಶ್ಚಿತ್ತವನ್ನು ಮಾಡಿಕೊಂಡ ಪಕ್ಷದಲ್ಲಿ ಜಪಹೋಮಾದಿಗಳನ್ನು ಮಾತ್ರ ಮಾಡಬಹುದು. ಶ್ರಾದ್ಧಾನ್ನಭೋಜನವನ್ನು ಮಾಡಕೂಡದು. ಬ್ರಾಹ್ಮಣನು ಸ್ವವರ್ಣ ಶವಾನುಗಮನ ಮಾಡಿದರೆ ಸ್ನಾನ, ಅನಂತರ ಅಗ್ನಿಸ್ಪರ್ಶ, ಅನಂತರ ಆಜ್ಯಪ್ರಾಶನ, ಪುನಃ ಸ್ನಾನಗಳಿಂದ ಶುದ್ಧನಾಗುತ್ತಾನೆ.

## || ನೃಪವೈಶ್ಯಾದಿವಿಷಯೇ ||

ನೃಪವೈಶ್ಯಯೋಸ್ತು ಸ್ವಸ್ವೋತ್ಕೃಷ್ಟವರ್ಣ ಪ್ರೇತಾನುಗಮನೇ ಬ್ರಾಹ್ಮಣವತ್ಪ್ರಾಯಶ್ಚಿತ್ತಂ | ಬ್ರಾಹ್ಮಣಸ್ಯತು ವಿಡ್ಭೂಪ ಪ್ರೇತಾನುಗಮನೇ ಕ್ರಮೇಣ ಪಕ್ಷಿಣ್ಯಹರಾಶೌಚಂ| ಅಂತೇ ಮಹಾನದೀಸ್ನಾನಂ| ಗಾಯತ್ರ್ಯಷ್ಟಶತಂ ಜಪಃ|

ಟೀ || ಕ್ಷತ್ರಿಯವೈಶ್ಯರು ತಮ್ಮತಮ್ಮ ಉತ್ಕೃಷ್ಟವರ್ಣದ ಶವಾನುಗಮನ ಮಾಡಿದರೆ ಅವರಿಗೆ ಬ್ರಾಹ್ಮಣನಂತೆ ಪ್ರಾಯಶ್ಚಿತ್ತವು. ಬ್ರಾಹ್ಮಣನು ಕ್ಷತ್ರಿಯ ವೈಶ್ಯ ಶವಾನುಗಮನ ಮಾಡಿದರೆ ಕ್ರಮವಾಗಿ ಒಂದುದಿನ ಪಕ್ಷಿಣ್ಯಾಶೌಚವು. ಅನಂತರ ಸಮುದ್ರಗಾ ನದೀಸ್ನಾನವು. ಎಂಟನೂರು ಗಾಯತ್ರೀ ಮಂತ್ರಜಪವೂ ವಿಹಿತವಾಗಿದೆ.

ಮೂಲ || ವೈಶ್ಯಶವಾನುಗಮನೇ ಕ್ಷತ್ರಿಯಸ್ಯೈಕರಾತ್ರಂ | ಶವಾನುಗಮನೇ ಶವಸ್ಪರ್ಶೇಚ ಶೂದ್ರಸ್ಯ ಅಹೋರಾತ್ರಮಾಶೌಚಂ | ಶವಸ್ಪರ್ಶಾಭಾವೇ ಸಂಚಯನಾತ್ಪ್ರಾಗ್ರೋದನೇ ಏಕಕಾಲಃ | ತದೂರ್ಧ್ವಂ ಸ್ನಾನಮೇವ | ಶೂದ್ರಶವಾನುಗಮನೇ ವಿಪ್ರಸ್ಯ ತ್ರ್ಯಹಮಾಶೌಚಂ | ನೃಪವೈಶ್ಯಯೋರ್ದ್ವ್ಯಹಂ | ತದಂತೇ ಸಮುದ್ರಗಾ ನದೀಸ್ನಾನಂ | ಅಷ್ಟೋತ್ತರಸಹಸ್ರಂ ಜಪಃ | ಯದೃಚ್ಛಯಾನುಗಮನೇ ಜಪಮಾತ್ರಂ | ಕ್ಷತ್ರಿಯಸ್ಯಾರ್ಧಸಹಸ್ರಂ | ವೈಶ್ಯಸ್ಯ ಪಾದೋನಂ | ತ್ರೈವರ್ಣಿಕ ಶವಾನುಗಮನೇ ಶೂದ್ರಸ್ಸ್ನಾನಮಾತ್ರೇಣ ಶುಧ್ಯತಿ |

ಟೀ || ಕ್ಷತ್ರಿಯನು ವೈಶ್ಯಶವಾನುಗಮನ ಮಾಡಿದರೆ ಒಂದುದಿನಾಶೌಚವು. ಶೂದ್ರನು ವೈಶ್ಯಶವಾನುಗಮನ ಶವಸ್ಪರ್ಶವನ್ನೂ ಮಾಡಿದರೆ ಒಂದುದಿನಾಶೌಚವು. ಶವಸ್ಪರ್ಶವಿಲ್ಲದಿದ್ದರೂ ಸಂಚಯನಾತ್ಪೂರ್ವದಲ್ಲಿ ರೋದನಮಾಡಿದರೆ ಶೂದ್ರ

ನಿಗೆ ಏಕಕಾಲವು. ತದೂರ್ಧ್ವದಲ್ಲಾದರೆ ಸ್ನಾನಮಾತ್ರವು. ಬ್ರಾಹ್ಮಣನು ಶೂದ್ರ ಶವಾನುಗಮನ ಮಾಡಿದರೆ ತ್ರಿರಾತ್ರಾಶೌಚವು. ಕ್ಷತ್ರವೈಶ್ಯರ ಶವಾನುಗಮನ ಮಾಡಿದರೆ ಎರಡುದಿನಾಶೌಚವು. ಅನಂತರ ಮಹಾನದೀಸ್ನಾನವೂ ಅಷ್ಟೋತ್ತರ ಸಹಸ್ರ ಗಾಯತ್ರೀಜಪವೂ. ದೈವಾನ್ಮಾರ್ಗಮಧ್ಯೇ ಶವಾನುಗಮನ ಸಂಭವಿಸಿದರೆ ಜಪಮಾತ್ರವು. ಕ್ಷತ್ರಿಯನಿಗೆ ಅರ್ಧಸಹಸ್ರವು. ವೈಶ್ಯನಿಗೆ ಪಾದೋನಸಹಸ್ರವು (ಮುಕ್ಕಾಲುಸಹಸ್ರ) ಬ್ರಾಹ್ಮಣಾದಿ ಮೂರುವರ್ಣದ ಶವಾನುಗಮನ ಮಾಡಿದ ಶೂದ್ರನಿಗೆ ಸ್ನಾನಮಾತ್ರವು.

ಮೂಲ || ಶವದರ್ಶನೇ :—

ಶ್ಲೋ || ಊಹ್ಯಮಾನಂ ಶವಂ ದೃಷ್ಟ್ವಾ ಸ್ವಮತ್ಯಾ ಜಲಮಾವಿಶೇತ್ |
ಅಲಂಕೃತಂ ಶವಂ ದೃಷ್ಟ್ವಾ ಸಚೇಲಂ ಸ್ನಾನಮಾಚರೇತ್ |
ಆಚಮ್ಯ ಕೇವಲಂ ಪ್ರೇತಂ ದೃಷ್ಟ್ವಾ ಕಾಷ್ಠವದಾಚರೇತ್ ||

ಟೀಕು || ಅಕಸ್ಮಾತ್ ಅಲಂಕಾರವಿಲ್ಲದ ಶವವನ್ನು ನೋಡಿದರೆ ಆಚಮನ ಮಾಡಬೇಕು ; ಅಲಂಕೃತಶವವನ್ನಾಗಲೀ ಬುದ್ಧಿಪೂರ್ವಕ ಪ್ರಯತ್ನದಿಂದಲಾಗಲೀ ನೋಡಿದರೆ ಸಚೇಲಸ್ನಾನ ಮಾಡಬೇಕು ; ಎಂದು ಷಡಶೀತಿ ಗ್ರಂಥದಲ್ಲಿ ಹೇಳಲ್ಪಟ್ಟಿದೆ.

## || ಕೃತಸಂಚಯೇ ||

ಕೃತಸಂಚಯನೇ ವಿಪ್ರಸ್ಯ ಸವರ್ಣನಿಮಿತ್ತ ರೋದನೇ ಆಚಮನಂ | ಅಸಂಚಿತೇ ಸ್ನಾನಂ | ಕೃತಸಂಚಯೇ ನೃಪವೈಶ್ಯಯೋಃ ಸಮಾನವರ್ಣಾತುರ ವ್ಯಂಜನೇ ಸ್ನಾನಂ | ಅಸಂಚಿತೇ ಸಚೇಲಸ್ನಾನಂ | ಬ್ರಾಹ್ಮಣ, ಕ್ಷತ್ರಿಯ, ವಿಶಾಂ, ಅನ್ಯೋನ್ಯಮಾತುರ ವ್ಯಂಜನೇಸತಿ ಸಂಚಯಾತ್ಪ್ರಾಕ್ಪಶ್ಚಾತ್ ಸ್ನಾನಾಚಮನೇ | ಅಗ್ರ್ಯವರ್ಣೇಷ್ವಪಿ ಅಸ್ಥಿಸಂಚಯಾತ್ಪ್ರಾಕ್ಪಶ್ಚಾಚ್ಚ ಮಿಥೋ ರೋದನೇ ಕ್ರಮಾದ್ದಿನಂ ಸ್ನಾನಂ | ಸಂಚಯಾತ್ಪೂರ್ವಂ ಶೂದ್ರನಿಮಿತ್ತಾತುರ ವ್ಯಂಜನೇ ವಿಪ್ರಸ್ಯ ತ್ರ್ಯಹಂ | ತತ್ಪರಂ ದಿನಂ | ಸಂಚಯಾತ್ಪೂರ್ವಂ ನೃಪವೈಶ್ಯಯೋರ್ದ್ವ್ಯಹಂ | ತತ್ಪರಂ ವಿಪ್ರವದ್ದಿನಂ | ಇತ್ಯನುಗಮನಾತುರ ವ್ಯಂಜನಾಶೌಚಂ ಪುರುಷಸ್ಯ ಪ್ರಾಪ್ತಂ ಸಂಪರ್ಕಾಶೌಚಂ ತತ್ಪತ್ನೀನಾಂ ದ್ರವ್ಯಾಣಾಂಚ ನಾಸ್ತಿ |

ಟೀ || ಬ್ರಾಹ್ಮಣನು ಸವರ್ಣನಿಮಿತ್ತವಾಗಿ ಸಂಚಯನಾನಂತರ ರೋದನ ಮಾಡಿದರೆ ಆಚಮನದಿಂದ ಶುದ್ಧಿಯು | ಸಂಚಯನಾತ್ಪೂರ್ವವಾದರೆ ಸ್ನಾನದಿಂದ

ಮಾಡಬೇಕು. ಕ್ಷತ್ರಿಯವೈಶ್ಯರುಗಳು ಸ್ವಸ್ವವರ್ಣವಿಷಯವಾಗಿ ಸಂಚಯಾನಂತರ ರೋದನಮಾಡಿದರೆ ಸ್ನಾನವು. ಸಂಚಯಾತ್ಪೂರ್ವವಾದರೆ ಸಚೇಲಸ್ನಾನವು. ಬ್ರಾಹ್ಮಣಾದಿ ಮೂರುವರ್ಣದವರೂ ಸಂಚಯಾತ್ಪೂರ್ವ ಅನ್ಯೋನ್ಯವಾಗಿ ರೋದನಮಾಡಿದರೆ ಸ್ನಾನವು. ಸಂಚಯಾನಂತರ ಆಚಮನವು. ಉತ್ತಮವರ್ಣ ವಿಷಯವಾಗಿ ಅಧಮವರ್ಣದವರು ರೋದನಮಾಡಿದಾಗ್ಯೂ ಅಸ್ಥಿಸಂಚಯಾತ್ಪೂರ್ವದಲ್ಲಿ ಒಂದುದಿನವು. ಅನಂತರದಲ್ಲಿ ಸ್ನಾನವು. ವಿಪ್ರನು ಶೂದ್ರನಿಮಿತ್ತವಾಗಿ ಸಂಚಯಾತ್ಪೂರ್ವ ಆತುರವ್ಯಂಜನ ಮಾಡಿದರೆ ಬ್ರಾಹ್ಮಣನಿಗೆ ಮೂರುದಿನವು. ಸಂಚಯಾನಂತರ ಒಂದುದಿನವು. ಕ್ಷತ್ರಿಯವೈಶ್ಯರು ಶೂದ್ರವಿಷಯವಾಗಿ ಸಂಚಯನಾತ್ಪೂರ್ವ ರೋದನಮಾಡಿದರೆ ಎರಡುದಿನವು. ಸಂಚಯನಾನಂತರ ಬ್ರಾಹ್ಮಣನಂತೆ ಒಂದುದಿನವು. ಗಂಡನಿಗೆ ಪ್ರಾಪ್ತವಾದ ಸಂಪರ್ಕಾಶೌಚವು ಅವನ ಹೆಂಡತಿಗೂ ಅವನ ಗೃಹಾದಿ ದ್ರವ್ಯಗಳಿಗೂ ಇಲ್ಲ.

## ಇತಿ ಅನುಗಮನ ಆತುರ್ಯವ್ಯಂಜನಾಶೌಚ ವಿಷಯಃ.

## ॥ ಆಶೌಚಾಪನೋದಕ ನಿಮಿತ್ತಾನಿ ॥

ಮುಖ್ಯಕರ್ತುಃ ದಾಹಾದಿ ಸಪಿಂಡೀಕರಣಾಂತ ಪ್ರೇತಕೃತ್ಯೇನ ಆಶೌಚಮಪನೋದ್ಯಂ। ಸಪಿಂಡ ಸಮಾನೋದಕಯೋಃ ಉದಕಾಂಜಲಿ ಪ್ರದಾನೇನ ಆಶೌಚಮಪನೋದ್ಯಂ। ಬಂಧೂನಾಂ ಉಕ್ತಕಾಲ ಸ್ನಾನಾಭ್ಯಾಮಪನೋದ್ಯಂ।

ಟೀ ॥ ಮುಖ್ಯಕರ್ತೃವು ದಹನಾದಿ ಸಪಿಂಡೀಕರಣಾಂತ ಕೃತ್ಯವನ್ನು ಮಾಡಿ ಸ್ನಾನತಶ್ಶುದ್ಧನಾಗುತ್ತಾನೆ. ಸಪಿಂಡ ಸಮಾನೋದಕರು ಸ್ವಸ್ವಾಶೌಚಾಂತದಲ್ಲಿ ಉದಕಾಂಜಲಿ ದಾನಮಾಡಿ ಸ್ವೋಕ್ತಕಾಲ ಸ್ನಾನದಿಂದ ಶುದ್ಧರಾಗುತ್ತಾರೆ. ಬಂಧುಜನಗಳು ಸ್ವಸ್ವಾಶೌಚ ಕಾಲಾಂತದಲ್ಲಿ ಸ್ನಾನದಿಂದ ಶುದ್ಧರಾಗುತ್ತಾರೆ.

## ॥ ಗ್ರಾಮಾಶೌಚಂ ॥

ಗ್ರಾಮೇ ಮೃತಿಸಂಭವೇ ತನ್ನಿರ್ಗಮನಾತ್ಪೂರ್ವಂ ಹೋಮ, ಸ್ವಾಧ್ಯಾಯ, ಜಪ, ಸುರಾರ್ಚನ, ಭೋಜನಾನಿ ನಕುರ್ಯಾತ್। ಏಕಾದಶ ಧನುರ್ಮ್ಯವಧಾನೇ ವೀಥ್ಯಂತರೇ ನಾದಾಚವಿಚ್ಛೇದೇವಾ ಸದಾ ಕುರ್ಯಾತ್। ಚತುಶ್ಶತ

ಬ್ರಾಹ್ಮಣವಾಸ ಗ್ರಾಮೇ ಅಂತಶ್ಶವೇ ಏಕಾದಶ ಧನುರ್ವ್ಯವಧಾನಾಭಾವೇಪಿ ವೀಥ್ಯಂತರೇ ಕುರ್ಯಾತ್ | ಏಕವೀಥ್ಯಾಂ ನಕುರ್ಯಾತ್ |

ಟೀ || ಗ್ರಾಮಮಧ್ಯದಲ್ಲಿ ಶವವಿದ್ದರೆ ತನ್ನಿರ್ಗಮನ ಪರ್ಯಂತವೂ ಜಪ, ಹೋಮ, ವೇದಪಾರಾಯಣ, ದೇವಪೂಜಾ ಭೋಜನಾದಿಗಳನ್ನು ಮಾಡಕೂಡದು. ಹನ್ನೊಂದು ಮಾರು ದೂರದ ಆಚೆ ಶವವಿದ್ದರೂ ಬೇರೆ ಬೀದಿಯಾಗಿದ್ದರೂ ಮನೆಮನೆಗೆ ಮಧ್ಯೆ ಗಲ್ಲಿಯಾಗಲೀ ಇದ್ದರೂ ಹೋಮಾದಿಗಳನು ಮಾಡಬಹುದು. ನಾಲ್ಕುನೂರು ಬ್ರಾಹ್ಮಣರು ವಾಸಮಾಡುವ ಗ್ರಾಮ ಮಧ್ಯದಲ್ಲಿ ಶವವಿದ್ದರೆ ಹನ್ನೊಂದುಮಾರು ದೂರ ವ್ಯವಧಾನವಿಲ್ಲದಿದ್ದಾಗ್ಯೂ ಬೇರೆ ಬೀದಿಯಾಗಿದ್ದರೆ ಜಪಾದಿಗಳನ್ನು ಮಾಡಬಹುದು. ಒಂದೇ ಬೀದಿಯಾಗಿದ್ದರೆ ಕೂಡದು.

## || ಅನಾಥಬಾಲ ಸ್ತ್ರೀಮರಣೇ ||

ಅನಾಥಬಾಲಸ್ತ್ರೀಣಾಂ ಮರಣೇ ವೀಥ್ಯಂತರೇ ಕುರ್ಯಾದಿತ್ಯಪರೇ | ಶೂದ್ರಾದಿಮರಣೇ ಏಕವೀಥ್ಯಾಮಪಿ ದೈವಪಿತ್ರ್ಯಾದಿಕರ್ಮ ಕುರ್ಯಾದೇವ | ಭಗವತ್ಪೂಜಾದಿ ಕರ್ಮಮಧ್ಯೇ ಗ್ರಾಮೇ ಮೃತಿಸಂಭವೇ ಶೇಷಂ ಕರ್ಮ ತಂತ್ರೇಣ ಸಮಾಪ್ಯ ಶವನಿರ್ಗಮನಾನಂತರಂ ಸಮಂತ್ರಕಂ ಪುನಃ ಕರ್ಮ ಕುರ್ಯಾತ್ | ಪ್ರತಿಷ್ಠಾದಿ ಕರ್ಮಮಧ್ಯೇ ತಂತ್ರೇಣ ಕರ್ಮನಿಷೇಧಾತ್ ನಿರ್ಗಮನಾನಂತರಮೇವ ಕುರ್ಯಾತ್ | ಶವನಿರ್ಹರಣಾನಂತರಂ ಗ್ರಾಮಾಶೌಚ ನಿವೃತ್ತಿರಿತಿ ವೈದ್ಯನಾಥಾದಿಮತಂ | ಬಹಿರ್ನಿರ್ಹೃತ ಶವಸ್ಯ ದಹನಾನಂತರಮೇವ ಗ್ರಾಮಸ್ಯ ಶುದ್ಧಿರಿತಿ ಷಡಶೀತ್ಯಾದಿಮತಂ | ತಥಾಚ |

ಶ್ಲೋ || ಅಂತಶ್ಶವೋ ಯದಿಭವೇ ತ್ತತೋ ನೀತ್ವಾ ತದಾ ಬಹಿಃ |
ನಾಂತಶ್ಶವಂ ಭಸ್ಮಸಾ ಧ್ಯಾವ ತ್ತಾವತಂತ್ರೇಣ ಪೂಜಯೇತ್ ||

ವ್ಯಾಖ್ಯಾ | ಭಸ್ಮಸಾದಿತ್ಯನೇನ ದಹನಾನಂತರಮೇವ ಗ್ರಾಮಾಶೌಚ ನಿವೃತ್ತಿಃ | ನತು ಬಹಿರ್ನಿಷ್ಕಾಸ ಮಾತ್ರಾತ್ |

ಟೀ || ಅನಾಥ ಬಾಲಕ ಸ್ತ್ರೀಯರುಗಳ ಮರಣದಲ್ಲಿ ಬೇರೆ ಬೀದಿಯಾಗಿದ್ದರೆ ಹೋಮಾದಿಗಳನ್ನು ಮಾಡಬಹುದೆಂದು ಕೆಲವರ ಮತವು. ಶೂದ್ರಾದಿ ಮರಣದಲ್ಲಿ ಒಂದೇ ಬೀದಿಯಾಗಿದ್ದರೂ ದೇವಪಿತ್ರ್ಯಾದಿ ಕರ್ಮವನ್ನು ಮಾಡಬಹುದು. ದೇವಾಲಯದ ಪೂಜಾದಿ ಕರ್ಮಮಧ್ಯದಲ್ಲಿ ಗ್ರಾಮದಲ್ಲಿ ಮೃತಿಸಂಭವಿಸಿ

ದರೆ ಶೇಷಕರ್ಮವನ್ನು ತಂತ್ರದಿಂದ ಪೂರ್ತಿಮಾಡಿ ಶವನಿರ್ಗಮನಾನಂತರ ಸಮಂತ್ರಕವಾಗಿ ಅವಶಿಷ್ಟಕರ್ಮವನ್ನು ಪುನಃ ಪೂರ್ತಿಯಾಗಿ ಮಾಡಬೇಕು. ಪ್ರತಿಷ್ಠಾದಿ ಕರ್ಮಮಧ್ಯದಲ್ಲಿ ತಂತ್ರದಿಂದ ಕರ್ಮನಿಷೇಧವಾದ್ದರಿಂದ ಶವನಿರ್ಗಮನಾನಂತರದಲ್ಲಿ ಸಮಂತ್ರಕವಾಗಿಯೇ ಮಾಡಬೇಕು.

## ಗ್ರಾಮಾಶೌಚ ವಿಷಯವು ಸಂಪೂರ್ಣವು.

## ॥ ಅಘಾಂತಕೃತ್ಯಂ ॥

ಅಘಾಂತೇ ಸಂಗವಕಾಲೇ ಸ್ನಾತ್ವಾ ವಿಪ್ರಃ ಪಾಣಿನಾ ತೋಯಂ ಸ್ಪೃಷ್ಟ್ವಾ ನೃಪೋ ವಾಹನಾದಿಕಂ ಸ್ಪೃಷ್ಟ್ವಾ ವೈಶ್ಯಃ ಪ್ರತೋದಂ ರಶ್ಮಿಂವಾ ಸ್ಪೃಷ್ಟ್ವಾ ಸ್ವಸ್ತಿವಾಚನಪೂರ್ವಕಂ ಬ್ರಾಹ್ಮಣಾನ್ ಭೋಜಯಿತ್ವಾ ಶುಧ್ಯತಿ । ಶೂದ್ರೋ ಯಷ್ಟಿಂ ಸ್ಪೃಷ್ಟ್ವಾ ಶುಧ್ಯತಿ ।

ಟೀ ॥ ಆಶೌಚಾಂತದಲ್ಲಿ ಬ್ರಾಹ್ಮಣನು ಸಂಗವಕಾಲದಲ್ಲಿ ಸ್ನಾನಮಾಡಿ ನೀರನ್ನು ಮುಟ್ಟಬೇಕು. ಕ್ಷತ್ರಿಯನು ಅದೇರೀತಿ ಸ್ನಾನಮಾಡಿ ವಾಹನಾದಿಗಳನ್ನು ಮುಟ್ಟಬೇಕು. ವೈಶ್ಯನು ಚಾವಟಿಯನ್ನಾಗಲೀ, ಹಗ್ಗವನ್ನಾಗಲೀ ಸ್ಪರ್ಶಮಾಡಿ ಪುಣ್ಯಾಹವಾಚನಪೂರ್ವಕ ಯಥಾಶಕ್ತಿ ಬ್ರಾಹ್ಮಣಭೋಜನವನ್ನು ಮಾಡಿಸಬೇಕು. ದ್ವಿಜರು ಈ ರೀತಿ ಶುದ್ಧರಾಗುತ್ತಾರೆ. ಶೂದ್ರನು ಪೂರ್ವೋಕ್ತರೀತ್ಯಾ ಸ್ನಾನಮಾಡಿ ದಂಡವನ್ನು ಸ್ಪರ್ಶಮಾಡಿದರೆ ಶುದ್ಧನಾಗುತ್ತಾನೆ.

## ॥ ಕ್ಷೌರತರ್ಪಣಾದಿ ವಿಚಾರಃ ॥

ದಶಮದಿನಾಪರಾಹ್ಣೇ ಸಪಿಂಡಮರಣ ಶ್ರವಣೇ ಪರೇದ್ಯುಃ ಕ್ಷೌರತರ್ಪಣೇ ಕುರ್ಯಾತ್ । ದಶಮದಿನಾತ್ಪರಂ ಭುಗ್ನ ಏವಾವಾಹನಂ । (ದರ್ಭಕೂರ್ಚೇಭುಗ್ನೇ) ನಶಿಲಾಯಾಂ । ಸಮಾನೋದಕ ಮರಣಶ್ರವಣೇ ತ್ರಿಂಶತ್ತಿಲೋದಕಂ । ಅಸನ್ನಿಧಾನೇ ಕ್ಷೌರಂ ನೇತ್ಯೇಕೇ ।

ಟೀ ॥ ದಶಮದಿನಾಪರಾಹ್ಣದಲ್ಲಿ ಸಪಿಂಡಾದಿಗಳ ಮರಣಶ್ರವಣದಲ್ಲಿ ಪರದಿನ ಕ್ಷೌರತರ್ಪಣಗಳನ್ನು ಮಾಡಬೇಕು. ದಶಮದಿನಾನಂತರ ದರ್ಭಭುಗ್ನದಲ್ಲಿ ಆವಾಹನ; ಶಿಲೆಯಲ್ಲಿಲ್ಲ. ಸಮಾನೋದಕರ ಮರಣಶ್ರವಣದಲ್ಲಿ ಮೂವತ್ತು ತಿಲೋದಕವು ಮಾತ್ರ. ಅಸನ್ನಿಧಾನದಲ್ಲಿ ಕ್ಷೌರವಿಲ್ಲವೆಂದು ಕೆಲವರು.

|| ಪರಾಶ್ರಿತ ಭಾರ್ಯಾವಿಷಯೇ ||

ಪರಾಶ್ರಿತಾಯಾ ಭಾರ್ಯಾಯಾ ಮೃತೌ ಪತ್ಯೋಸ್ತ್ರಿರಾತ್ರಕಂ | ಪರಾಶ್ರಿತ ಭಾರ್ಯಾಮರಣೇ ಊಢಭರ್ತೃ ಗೂಢಭರ್ತ್ರೋರಪಿ ತ್ರಿದಿನಂ | ತಯೋರ್ಮೃತೌ ತಸ್ಯಾಶ್ಚ ತ್ರ್ಯಹಂ | ತಸ್ಯಾಮೃತೌ ಪರಿಣೇತೃ ಜಾರಪತಿ ಸಪಿಂಡಯೋರ್ದಿನಂ | ಪ್ರಜಾಪತಿಃ—

ಶ್ಲೋ || ಅನ್ಯಾಶ್ರಿತೇಷು ದಾರೇಷು ಪರನಾರೀ ಸುತೇಷುಚ |
ಗೋತ್ರಿಣ ಸ್ನಾನಶುದ್ಧಾಸ್ಸ್ಯುಸ್ತ್ರಿರಾತ್ರೇಣೈವ ತತ್ಪಿತಾ |

ವಿಷ್ಣುಃ—

ಶ್ಲೋ || ಅನೌರಸೇಷು ಪುತ್ರೇಷು ಜಾತೇಷುಚ ಮೃತೇಷುಚ |
ತ್ರಿರಾತ್ರೇಣ ಭವೇಚ್ಛುದ್ಧಿ ರೇಕಾಹಂತು ಸಪಿಂಡತಃ ||

ಕ್ಷೇತ್ರಜಪುತ್ರಾಣಾಂ ಜನನೇ ಮರಣೇಚ ಕ್ಷೇತ್ರಜಾದಿ ಪಿತ್ರೋಸ್ತ್ರ್ಯಹಂ | ಪಿತ್ರೋರಿತಿ ದ್ವಿವಚನೇನ ಬೀಜೀಕ್ಷೇತ್ರೀಚ ಪಿತರೋಚ್ಯತೇ | ತಯೋಸ್ಸಪಿಂಡಾನಾಮೇಕಾಹಂ | ಸಪಿಂಡಾನಾಂ ಸದ್ಯಶ್ಶುದ್ಧಿರಿತಿ ಕೇಚಿತ್ | ಸಪಿಂಡತ ಇತಿ ಸಪ್ತಮ್ಯರ್ಥೇ ತಸಿಃ | ಉಪನೀತಾನಾಂ ಅನುಪನೀತಾನಾಂಚ ಮೃತೌ ತತ್ಪಿತ್ರೋಸ್ತ್ರಿದಿನಮೇವ | ಭ್ರಾತೃಣಾಮಪಿ ತ್ರಿದಿನಂ | ಪರೋಕ್ಷೇ ಪಕ್ಷಿಣೀ ತ್ಯಪಿವೇಚನೇ | ಉಭಯಪಕ್ಷ ಜ್ಞಾತೀನಾಮೇಕಾಹಂ | ಉಭಯವಿಧ ಪಿತೃಮೃತೌ ಕ್ಷೇತ್ರಜಪುತ್ರಾಣಾಮಪಿ ತ್ರಿದಿನಂ | ಪರಾಶ್ರಿತಾಯಾಅಪಿ ಪುತ್ರ್ಯಾಮೃತೌ ತತ್ಪಿತ್ರೋರ್ಭ್ರಾತೃಣಾಂಚ ತ್ರ್ಯಹಂ | ಇತಿ ಶತಕೇ | ಇದಂ ಕಲೌ ಪ್ರಾಯಶೋನಾಸ್ತಿ |

ಟೀ || ವ್ಯಭಿಚಾರಿಣೀ ಸ್ತ್ರೀಯ ಮೃತಿಯಲ್ಲಿ ಮದುವೆಯಾದ ಪತಿಗೂ ಜಾರಪತಿಗೂ ಮೂರುದಿನಾಶೌಚವು. ಈ ಪತಿಗಳ ಮೃತಿಯಲ್ಲಿ ಅವಳಿಗೂ ಮೂರುದಿನಾಶೌಚವು. ಈ ಜಾರಿಣಿಯ ಮೃತಿಯಲ್ಲಿ ಮದುವೆಯಾದ ಗಂಡನ ಜ್ಞಾತಿಗಳಿಗೂ ಜಾರಪತಿಯ ಜ್ಞಾತಿಗಳಿಗೂ ಒಂದುದಿನಾಶೌಚವು. ಕ್ಷೇತ್ರಜ ಪುತ್ರರ ಜನನಮರಣದಲ್ಲಿ ಕ್ಷೇತ್ರಜಾದಿ ತಂದೆಗಳಿಗೆ ಮೂರುದಿನಾಶೌಚವು. 'ಪಿತ್ರೋಃ' ಎಂದು ದ್ವಿವಚನಕ್ಕೆ ಬೀಜೀ ಕ್ಷೇತ್ರೀ ಪಿತೃಗಳೆಂದು ಅರ್ಥ. ಈ ಪಿತೃಗಳ ಜ್ಞಾತಿಗಳಿಗೆ ಒಂದುದಿನಾಶೌಚವು. ಜ್ಞಾತಿಗಳಿಗೆ ಸದ್ಯಶ್ಶುದ್ಧಿ ಎಂದು ಕೆಲವರ ಮತ, ಉಪನೀತನಾದಾಗ್ಯೂ ಅನುಪನೀತನಾದಾಗ್ಯೂ ಪುತ್ರನ ಮೃತಿ

ಯಲ್ಲಿ ಆ ತಂದೆಗಳಿಗೆ ಮೂರುದಿನ ಮಾತ್ರ ಆಶೌಚವು. ಸಹೋದರರಿಗೂ ಮೂರುದಿನಾಶೌಚವು. ಪರೋಕ್ಷದಲ್ಲಿ ಪಕ್ಷಿಣ್ಯಾಶೌಚವೆಂದು ಅಘವಿವೇಚನ ದಲ್ಲಿದೆ. ಎರಡು ಪಕ್ಷದ ಜ್ಞಾತಿಗಳಿಗೂ ಒಂದುದಿನಾಶೌಚವು ಉಭಯವಿಧ ತಂದೆಗಳ ಮೃತಿಯಲ್ಲಿ ಕ್ಷೇತ್ರಜ ಪುತ್ರರುಗಳಿಗೆ ಮೂರುದಿನಾಶೌಚವು. ವ್ಯಭಿಚಾ ರಿಣಿಯಾದಾಗ್ಯೂ ಪುತ್ರಿಯ ಮೃತಿಯಲ್ಲಿ ಅವಳ ತಂದೆತಾಯಿಗಳಿಗೂ ಸಹೋದರ ರಿಗೂ ಮೂರುದಿನಾಶೌಚವೆಂದು ಶತಕದಲ್ಲಿದೆ. ಇದು ಕಲಿಯುಗದಲ್ಲಿ ಪ್ರಾ ಯಶಃ ಇಲ್ಲ. ಶಾಸ್ತ್ರದಲ್ಲಿರುವುದರಿಂದ ಇಲ್ಲಿ ಬರೆಯಲ್ಪಟ್ಟಿದೆ.

## ‖ ಕಶ್ಚಿದ್ವಿಶೇಷಃ ‖

ಶ್ಲೋ ‖ ಗುರ್ವಾದೌ ಸೋದಕೇ ಸ್ರಾವೇ ಮಾತೃಬಂಧೌ ವಯಸ್ಯಘಂ ।
ಸರ್ವವರ್ಣಸಮಂಹೀತಿ ವಿಜ್ಞಾನೇಶ್ವರ ಭಾಷಿತಂ ‖

ಏಕವಿಷಯೇ ಗುರುಲಘ್ವಾಶೌಚ ಪ್ರತಿಪಾದಕ ವಚನಾನಾಂ ಪ್ರತ್ಯಕ್ಷ ಪರೋಕ್ಷ ವಿಷಯತ್ವೇನ ವ್ಯವಸ್ಥಾ ।

ಶ್ಲೋ ‖ ಸ್ಮೃತಿದ್ವೈಧೇ ಪರೋಕ್ಷೇಲ್ಪಂ ಪ್ರತ್ಯಕ್ಷೇ ಗುರ್ವಿತಿಸ್ಥಿತಿಃ ।
ಯಥಾಹಿ ಯೋಪಿಸಂಬಂಧೇ ಘ್ವಹರ್ವಿಧಿರಸನ್ನಿಧೌ ‖
ಯಾಜ್ಯಾದೌ ಶ್ವಶುರಾದೌಚ ಶಿಷ್ಯಾದೌ ಪಕ್ಷಿಣೀವಿಧಿಃ ।
ಶ್ವಶ್ರ್ವಾಂಶ್ಚೈವ ಭಗಿನ್ಯಾಂಚ ಮಾತುಳಾನ್ಯಾಂಚ ಮಾತುಲೇ ‖
ಪಿತ್ರೋಸ್ಸ್ವಸರಿ ತದ್ವಚ್ಚ ಪಕ್ಷಿಣೀ ಕ್ಷಪಯೇನ್ನಿಶಾಂ ।
ಮಾತುಳೇ ಶ್ವಶುರೇ ಮಿತ್ರೇ ಗುರೌ ಗುರ್ವಂಗನಾಸುಚ ‖
ಆಶೌಚಂ ಪಕ್ಷಿಣೀಂ ರಾತ್ರಿಂ ಮೃತಾ ಮಾತಾಮಹೀ ಯದಿ ।
ಮಾತುಳೇ ಪಕ್ಷಿಣೀಂ ರಾತ್ರಿಂ ಶಿಷ್ಯರ್ತ್ವಿಗ್ಬಾಂಧವೇಷುಚ ‖

ಇತ್ಯಾದಿವಚನೈಸ್ತ್ರ್ಯಹಾಶೌಚ ವಿಷಯೇಷು ಪಕ್ಷಿಣೀವಿಧಾನಂ ಅಸನ್ನಿಧಾ ನೇವೇದಿತವ್ಯಂ । ಸನ್ನಿಧಾನೇತು ಮಾತಾಮಹೀ ಮಾತುಳ ತತ್ಪತ್ನೀ ಪಿತೃಷ್ವಸೃ ಮಾತೃಷ್ವಸೃ ಶ್ವಶ್ರೂಶ್ವಶುರ ಗುರು ಗುರುಪತ್ನೀ ಭಗಿನೀ ಶಿಷ್ಯರ್ತ್ವಿಙ್ಮಿತ್ರಾಣಾಂ ಮೃತೌ ಪುರುಷಸ್ಯ ತ್ರಿರಾತ್ರಮೇವ । ಮಾತಾಮಹ ಮಾತಾಮಹೀ ಮಾತುಳ ಮಾತುಳಾನೀ ಮಾತೃಷ್ವಸೃ ಪಿತೃಷ್ವಸ್ರೂಣಾಂ ಭಗಿನೀನಾಂ, ಮೃತೌ ಊಢಾ

ನಾಂ ಸ್ತ್ರೀಣಾಂ ಸದಾ ಪಕ್ಷಿಣ್ಯೇವ | ಊಢಾನಾಂ ಭಗಿನೀನಾವೇವ ಮೃತೌ ಪರಸ್ಪರಂ ಪಕ್ಷಿಣೀವಿಧಾನಾತ್ ಅನೂಢಭಗಿನೀ ಮೃತೌ ಊಢಾಯಾ ಭಗಿನ್ಯಾಃ ಸ್ನಾನಮೇವೇತಿ ಭಾತಿ |

## ॥ ಶ್ರುತಿಸ್ಮೃತಿವಿಹಿತ ಧರ್ಮಾನುಷ್ಠಾನೇ ಮಹಾಫಲಂ ॥

ಆಪಸ್ತಂಬ ಧರ್ಮಸೂತ್ರೇ ದ್ವಿತೀಯಪ್ರಶ್ನೇ ಖಂಡ ೨, ಸೂತ್ರ ೨| ೩| ೪|

ಸರ್ವವರ್ಣಾನಾಂ ಸ್ವಧರ್ಮಾನುಷ್ಠಾನೇ ಪರಮಪರಿಮಿತಂ ಸುಖಂ ||೨|| ತತಃ ಪರಿವೃತ್ತೌ ಕರ್ಮಫಲಶೇಷೇಣ ಜಾತಿಗ್ಂ ರೂಪಂ ವರ್ಣಂ ಬಲಂ ಮೇಧಾಂ ಪ್ರಜ್ಞಾಂ ದ್ರವ್ಯಾಣಿ ಧರ್ಮಾನುಷ್ಠಾನಮಿತಿ ಪ್ರತಿಪದ್ಯತೇ | ತಚ್ಚಕ್ರವದುಭಯೋರ್ಲೋಕಯೋಃ ಸುಖ ಏವ ವರ್ತತೇ ||೩|| ಯಥೌಷಧಿ ವನಸ್ಪತೀನಾಂ ಬೀಜಸ್ಯ ಕ್ಷೇತ್ರಕರ್ಮ ವಿಶೇಷೇ ಫಲಪರಿವೃದ್ಧಿರೇವಂ ||೪||

ಟೀ || ಬ್ರಾಹ್ಮಣಾದಿ ಸರ್ವವರ್ಣದವರಿಗೂ ಸ್ವಸ್ವವರ್ಣೋಕ್ತ ಧರ್ಮಾನುಷ್ಠಾನದಲ್ಲಿ ಅಳತೆಯಿಲ್ಲದಷ್ಟು (ಅಪರಿಮಿತವಾದ) ಸುಖಪ್ರಾಪ್ತಿಯು. ಪುನರ್ಜನ್ಮದಲ್ಲಿ ಪೂರ್ವಜನ್ಮದ ಉತ್ತಮಕರ್ಮಫಲ ವಿಶೇಷದಿಂದ ಪೂರ್ವಜನ್ಮಕ್ಕಿಂತಲೂ ಶ್ರೇಷ್ಠವಾದ ಜಾತಿಯನ್ನೂ ಸೌಂದರ್ಯವನ್ನೂ ವರ್ಣವನ್ನೂ ಬಲವನ್ನೂ ಬುದ್ಧಿಶಕ್ತಿವಿಶೇಷವನ್ನೂ ಜ್ಞಾನವಿಶೇಷವನ್ನೂ ಧನವನ್ನೂ ಧರ್ಮಕರ್ಮಾದ್ಯಾಚರಣೆಯನ್ನೂ ಕೂಡ ಸರ್ವವರ್ಣದವರೂ ಹೊಂದುತ್ತಾರೆ. ಆದ್ದರಿಂದ ಚಕ್ರಭ್ರಮಣದೋಪಾದಿಯಲ್ಲಿ ಇಹಲೋಕ ಪರಲೋಕಗಳಲ್ಲಿ ಸುಖದಲ್ಲಿರುತ್ತಾರೆ. ಓಷಧಿವನಸ್ಪತಿಗಳಿಗೆ ಬೀಜ ಕ್ಷೇತ್ರಗಳ ಮತ್ತು ಸಂಸ್ಕಾರಗಳ ವಿಶೇಷದಿಂದ ಫಲಾಭಿವೃದ್ಧಿಯಾಗುವಂತೆ ಇಹ ಪರಲೋಕಗಳಲ್ಲಿ ವಿಶೇಷವಾದ ಶ್ರೇಯೋಭಿವೃದ್ಧಿಯನ್ನು ಹೊಂದುವರೆಂದು ತಾತ್ಪರ್ಯವು.

ಇತ್ಯಘನಿರ್ಣಯೋ ದ್ರಾವಿಡಪಕ್ಷಃ.

ಶ್ರೀಕೃಷ್ಣಾರ್ಪಣಮಸ್ತು.

॥ ಶ್ರೀರಸ್ತು ॥

# ಅಘ ನಿರ್ಣಯಃ

## ಆಂಧ್ರಾಚಾರಾಶೌಚ ವಿವರಣಂ

N.B.—ಆಂಧ್ರಾಃ, ಮಧ್ವಾಚಾರ್ಯಮತಾವಲಂಬಿನಃ, ಕರ್ಮಿ ಕರ್ಣಾಟಕಾಃ, ಬಡಗನಾಡಿತಿ ಕರ್ಣಾಟಕಾಶ್ಚೈತದ್ದೇಶೇ ಪ್ರಾಯಶಃ ಆಂಧ್ರಾಚಾರರೀತ್ಯಾ ಆಶೌಚಾನುಷ್ಠಾತಾರಃ ॥

---

ಶ್ಲೋ॥ ಅಂತರಾಯ ತಿಮಿರೋಪಶಾಂತಯೇ ।
ಶಾಂತಪಾವನಮಚಿಂತ್ಯವೈಭವಂ ॥
ತನ್ನರಂ ವಪುಷಿ ಕುಂಜರಂ ಮುಖೇ ।
ಮನ್ಮಹೇ ಕಿಮಪಿ ತುಂದಿಲಂ ಮಹಃ ॥೧॥
ಯತ್ಕೃಪಾಲೇಶ ಸಂಪಾತಾದುದೇತಿ ಜ್ಞಾನಭಾಸ್ಕರಃ ।
ರಾಮಸ್ಯ ತತ್ಪದದ್ವಂದ್ವಂ ನೌಮಿ ಜಾಡ್ಯನಿವೃತ್ತಯೇ ॥೨॥

ಅಥ ನಿರ್ಣಯಸಿಂಧು, ಅಭಿನವಷಡಶೀತ್ಯಾದ್ಯನೇಕ ಪ್ರಾಚೀನಾಶೌಚ ಸ್ಮೃತಿ ನಿಬಂಧನಾನ್ಯವಲೋಕ್ಯ ಆಂಧ್ರಾಣಾಂ ಮಧ್ವಮತಾವಲಂಬಿನಾಂ ಕರ್ಮಿ ಕರ್ಣಾಟಕಾನಾಂಚ ಆಶೌಚನಿರ್ಣಾಯಕಃ ಅಘನಿರ್ಣಯಾಖ್ಯೋಽಯಂ ಗ್ರಂಥ ಭಾಗಃ ವಾಕ್ಯರೂಪೇಣ ಕಥ್ಯತೇ ॥

### ೧. ತತ್ರ ಜಾತಾಶೌಚಂ ನಿರ್ಣೀಯತೇ.

ಬ್ರಾಹ್ಮಣಾನಾಂ ಪ್ರಸೂತಿನಿಮಿತ್ತಂ ಜಾತಾಶೌಚಂ ದಶರಾತ್ರಂ । ಕ್ಷತ್ರಿಯಾಣಾಂ ದ್ವಾದಶರಾತ್ರಂ । ವೈಶ್ಯಾನಾಂ ಪಂಚದಶರಾತ್ರಂ । ಶೂದ್ರಾಣಾಂ ಮಾಸಂ । ತತ್ತತ್ಕಾಲಾತಿಕ್ರಮೇ ನಾಸ್ತ್ಯಾಶೌಚಂ । ಪಿತುಃ ಸ್ನಾನಮಾತ್ರಂ । ಸೂತಿಕಾಯಾಃ ಪುತ್ರಜನನೇ ದಶಾಹಾದೂರ್ಧ್ವಂ ವಿಂಶತಿರಾತ್ರಂ । ಪುತ್ರಿಕಾ ಜನನೇ ತ್ರಿಂಶದ್ರಾತ್ರಂ ।

ಟೀ ‖ ಬ್ರಾಹ್ಮಣರಿಗೆ ಜಾತಾಶೌಚವು ಹತ್ತುದಿನವು. ಕ್ಷತ್ರಿಯರಿಗೆ ಹನ್ನೆರಡು ದಿನವು. ವೈಶ್ಯರಿಗೆ ಹದಿನೈದು ದಿನವು. ಶೂದ್ರರಿಗೆ ಒಂದು ತಿಂಗಳು. ಉಕ್ತಕಾಲವು ಮೀರಿದಮೇಲೆ ಆಶೌಚವಿಲ್ಲ. ಮಕ್ಕಳ ಜನನದಲ್ಲಿ ತಂದೆಗೆ ಉಕ್ತ ಕಾಲಾನಂತರದಲ್ಲಿ ಸ್ನಾನಮಾತ್ರ. ಗಂಡುಮಗುವನ್ನು ಪ್ರಸವಿಸಿದ ಸ್ತ್ರೀಗೆ ಸ್ವಜಾತ್ಯಾಶೌಚಕ್ಕೆ ಮೇಲೆ ಇಪ್ಪತ್ತು ದಿವಸವು. ಹೆಣ್ಣುಮಗುವನ್ನು ಪ್ರಸವಿಸಿದವಳಿಗೆ ಸ್ವಜಾತ್ಯುಕ್ತಾಶೌಚಕ್ಕೆ ಮೇಲೆ ಮೂವತ್ತು ದಿವಸವು ಕರ್ಮಾನರ್ಹತ್ವಮಾತ್ರ ಆಶೌಚವು.

N.B.—ದ್ರಾವಿಡಪಕ್ಷದಲ್ಲಿ ಇದರ ವಿಶೇಷ ಭೇದವನ್ನು ನೋಡಿ

## ೨. ಸ್ರಾವ ಪಾತಾಶೌಚಂ.

ಆದ್ಯಮಾಸತ್ರಯೇ ಗರ್ಭಸ್ರಾವೇ ಮಾತುಸ್ತ್ರಿರಾತ್ರಂ | ಚತುರ್ಥ, ಪಂಚಮ, ಷಷ್ಠಮಾಸೇಷು ಮಾಸಸಂಖ್ಯಾಕ ದಿನಮಾಶೌಚಂ | ಪಿತುಸ್ಸಪಿಂಡಾನಾಂಚ ಸ್ನಾನಮಾತ್ರಂ | ಚತುರ್ಥಮಾಸೇ ಈಷತ್ಕಠಿನಪಾತೇ ಪಿತುಭ್ರಾತೃಣಾಂಚ ತ್ರಿದಿನಂ | ಜ್ಞಾತೀನಾಂ ಸ್ನಾನಂ | ಪಂಚಮ, ಷಷ್ಠ, ಮಾಸಯೋಃ ಪಿತ್ರಾದೀನಾಂ ಸರ್ವೇಷಾಂ ಜ್ಞಾತೀನಾಂ ತ್ರಿದಿನಮಿತ್ಯಭಿನವ ಷಡಶೀತಿಕಾರಮತಂ | ಜಾತಾಶೌಚೇ ಸೂತಕೀಂವಿನಾ ಅಸ್ಪೃಶ್ಯತ್ವಂ ಪಿತ್ರಾದೀನಾಂ ನಾಸ್ತಿ | ಮೃತಾಶೌಚೇತು :—

ಶ್ಲೋ ‖ ಮೃತಕಂತು ತ್ರಿಧಾ ಕೃತ್ವಾ ಯಾವತ್ಪೂರ್ವಾಂಶನಿರ್ಗಮಃ |
ಸರ್ವೇಪ್ಯಸ್ಪೃಶ್ಯತಾಂ ಯಾಂತಿ ಸಂಚಯಸ್ತೂಪಲಕ್ಷಣಂ ‖

ವ್ಯಾಖ್ಯಾ ‖ ತ್ರಿಧಾವಿಭಕ್ತ ಸ್ವಾಶೌಚಕಾಲಸ್ಯ ಯಾವತ್ಪೂರ್ವಾಂಶನಿರ್ಗಮಃ | ಅಸ್ಥಿಸಂಚಯಾತ್ಪೂರ್ವಂವಾ ಪುತ್ರಾದೀನಾಮಸ್ಪೃಶ್ಯತ್ವಂ | ತದೂರ್ಧ್ವಂ ನಾಸ್ತೀತಿ ಪ್ರಾಚೀನಷಡಶೀತೌ | ಇದಂ ಕಲೌ ನಿಷಿದ್ಧಮಿತ್ಯಭಿನವಷಡಶೀತೌ | ಸಪ್ತಮಮಾಸ ಪ್ರಭೃತಿಷು ಸ್ವಜಾತ್ಯುಕ್ತಂ ದಶಾಹಾದ್ಯಾಶೌಚಂ ಸಪಿಂಡಾನಾಂ ಮಾತುಶ್ಚ ಸಮಂ ; ಪುತ್ರಿಕಾಜನನೇಪ್ಯೇವಂ |

ಶ್ಲೋ ‖ ಅಪ್ರತ್ತಾನಾಂ ತಥಾ ಸ್ತ್ರೀಣಾಂ ಸಾಪಿಂಡ್ಯಂ ಸಪ್ತಪೂರುಷಂ |
ಪ್ರತ್ತಾನಾಂ ಭರ್ತೃಸಾಪಿಂಡ್ಯಂ ಪ್ರಾಹದೇವಃ ಪ್ರಜಾಪತಿಃ ‖

ಇತ್ಯಾದಿಭಿಃ ಕನ್ಯಾಜನನೇ ಸಪ್ತಪೂರುಷಂ ಜಾತಾಶೌಚಂ ಸಿದ್ಧ್ಯತಿ ತ್ರಿಪೂರುಷ ಸಾಪಿಂಡ್ಯಪ್ರತಿಪಾದಕ ವಚನಾನಾಂ ಕಾಸೀನಕಸ್ಯಾಪರತ್ವೇನ ಕಮ

ಲಾಕರಭಟ್ಟಾದಿಭಿ ರ್ವ್ಯವಸ್ಥಾಕೃತಾ | ದ್ರಾವಿಡಾನಾಂತು ಕನ್ಯಾಜನನೇ ತ್ರಿಪೂರುಷ ಮಧ್ಯವರ್ತ್ತಿ ಜ್ಞಾತೀನಾಮೇವ ಜಾತಾಶೌಚಂ| ನತು ತದೂರ್ಧ್ವಸ್ಥಿತಾನಾಂ|

ಶ್ಲೋ || ಷಷ್ಠೇಮಾಸಿ ಗತೇ ಗರ್ಭೇ ನಿರ್ಗಮಸ್ಸೂತಿರುಚ್ಯತೇ |

ಪಂಚಮೇ ಮಾಸಿ ಷಷ್ಠೇವಾ ಪಾತಸ್ಸ್ಯಾದ್ಗರ್ಭನಿರ್ಗಮಃ |

ಚತುರ್ಥಾದ್ಯೇಷು ಮಾಸೇಷು ಸ್ರಾವೋ ಗರ್ಭಸ್ಯ ನಿರ್ಗಮಃ ||

ಮಾಸಚತುಷ್ಟಯ ಪರ್ಯಂತಂ ಗರ್ಭಸ್ರಾವಇತಿ, ಪಂಚಮಷಷ್ಠಮಾಸಯೋಃ ಗರ್ಭಪಾತಇತಿ, ಸಪ್ತಮಮಾಸಾದಿ ಪ್ರಸೂತಿರಿತಿ, ಪ್ರಾಚೀನಷಡಶೀತಾವಭಿಹಿತಂ ||

ಟೀ || ಮೂರು ಮಾಸಗಳೊಳಗೆ ಗರ್ಭಸ್ರಾವದಲ್ಲಿ ತಾಯಿಗೆ ಮಾತ್ರ ತ್ರಿದಿನಾಶೌಚವು. ನಾಲ್ಕು, ಐದು, ಆರನೇ ಮಾಸಗಳಲ್ಲಿ ತಾಯಿಗೆ ಮಾಸ ಸಂಖ್ಯಾಕ (ಎಷ್ಟನೇ ತಿಂಗಳೋ ಅಷ್ಟು ದಿನಸಂಖ್ಯೆ) ದಿನಾಶೌಚವು. ತಂದೆಗೂ ಜ್ಞಾತಿಗಳಿಗೂ ಸ್ನಾನಮಾತ್ರವು. ನಾಲ್ಕನೇ ತಿಂಗಳು ಮೊದಲು ಈಷತ್ಕರಿಸ ಪಾತದಲ್ಲಿ ತಂದೆಗೂ ಅಣ್ಣತಮ್ಮಂದಿರಿಗೂ ಮೂರುದಿನವು. ಜ್ಞಾತಿಗಳಿಗೆ ಸ್ನಾನವು. ಐದು, ಆರನೇ ತಿಂಗಳುಗಳಲ್ಲಿ ಪಿತ್ರಾದಿ ಸರ್ವಜ್ಞಾತಿಗಳಿಗೂ ತ್ರಿದಿನಾಶೌಚವೆಂದು ಷಡಶೀತಿಕಾರರ ಮತವು. ಜನನಾಶೌಚದಲ್ಲಿ ಪ್ರಸೂತ ಸ್ತ್ರೀ ಹೊರತು ಅನ್ಯರಿಗೆ ಅಸ್ಪೃಶ್ಯತ್ವವಿಲ್ಲ. ಮೃತಾಶೌಚದಲ್ಲಿ ಮೃತಾಶೌಚವನ್ನು ಮೂರುಭಾಗ ಮಾಡಿ ಪ್ರಥಮಭಾಗದಲ್ಲೂ ಸಂಚಯನಾತ್ಪೂರ್ವದಲ್ಲೂ ಪುತ್ರಾದಿಗಳಿಗೆ ಅಸ್ಪೃಶ್ಯತ್ವವೆಂದೂ, ತದೂರ್ಧ್ವದಲ್ಲಿ ಅಸ್ಪೃಶ್ಯತ್ವವಿಲ್ಲವೆಂದೂ ಪ್ರಾಚೀನ ಷಡಶೀತಿ ಮತವು. ಇದು ಶಿಷ್ಟಾಚಾರದಲ್ಲಿಲ್ಲವು. ಕಲಿಯುಗದಲ್ಲಿ ನಿಷೇಧವು. ಏಳನೇಮಾಸ ಮೊದಲಾಗಿ ತಮ್ಮ ಜಾತ್ಯುಕ್ತ ಪೂರ್ಣಾಶೌಚವು ತಾಯಿಗೂ ಜ್ಞಾತಿಗಳಿಗೂ ಸಹ ಸಮಾನವು. ಹೆಣ್ಣುಮಗುವಿನ ಜನನದಲ್ಲಿ ಸಪ್ತಪೂರುಷ ಪಿತೃಜ್ಞಾತಿಗಳಿಗೂ ಜಾತಾಶೌಚವು. ದ್ರಾವಿಡಪಕ್ಷದಲ್ಲಿ ತ್ರಿಪೂರುಷಪರ್ಯಂತ ಮಾತ್ರ ಜಾತಾಶೌಚವು. ನಾಲ್ಕು ತಿಂಗಳೊಳಗೆ ಗರ್ಭಸ್ರಾವವೆಂತಲೂ ಐದು ಆರನೇ ತಿಂಗಳುಗಳಲ್ಲಿ ಗರ್ಭಪಾತವೆಂತಲೂ, ಏಳನೇ ತಿಂಗಳು ಮೊದಲು ಪ್ರಸೂತಿ ಎಂತಲೂ ಪ್ರಾಚೀನಷಡಶೀತಿ ಮತವು.

## ೩. ಸ್ವಗೃಹೇ ಪುತ್ರೀಪ್ರಸವೇ

ಪಿತುರ್ಗೃಹೇ ಪುತ್ರಿಕಾಯಾಃ ಪುತ್ರಪುತ್ರೀಜನನೇ ಮಾತಾಪಿತ್ರೋಸ್ತ್ರಿರಾತ್ರಮಾಶೌಚಂ| ಭ್ರಾತೃಗೃಹೇ ಭ್ರಾತೄಣಾಂ ತ್ರಿರಾತ್ರಂ| ಪಿತೃವ್ಯಾದಿಗೃಹೇ

ತೇಷಾಂದಿನಂ | ಗೃಹಶಬ್ದಸ್ಸನ್ನಿಧಾನಪರಃ | ಗ್ರಾಮಾಂತರೇ ನಾಸ್ತ್ಯಾಶೌಚಂ |

ಶ್ಲೋ|| ಪ್ರಸೂತಾಚೇತ್ಪಿತುರ್ಗೇಹೇ ಪುತ್ರೀ ಪಿತ್ರೋಸ್ತ್ರಿರಾತ್ರಕಂ |
ಭ್ರಾತೄಣಾಂಚ ತ್ರಿರಾತ್ರಂಸ್ಯಾತ್ ಜ್ಞಾತೀನಾಮೇಕರಾತ್ರಕಂ ||

ಇತಿ ಷಡಶೀತೌ—

ಶ್ಲೋ|| ಸೂಯತೇಚೇತ್ಪಿತುರ್ಗೇಹೇ ಜಾತಂ ಪಿತ್ರೋಸ್ತ್ರಿವಾಸರಂ |
ಷಷ್ಠೇಮಾಸಿ ವಿನಿರ್ಯಾತೇ ಪ್ರಸೂತಿರ್ಗರ್ಭನಿರ್ಗಮಃ |

ಸಪ್ತಮಮಾಸಪ್ರಭೃತಿ ಪ್ರಸೂತಿರಿತ್ಯುಚ್ಯತೇ| ತದಾದಿ ಸ್ವಗೃಹೇ ಪುತ್ರೀಪ್ರಸವೇಪಿ ಪಿತ್ರೋಸ್ತ್ರಿರಾತ್ರಂ ಜಾತಾಶೌಚಮಿತಿ ಪ್ರಾಚೀನ ಷಡಶೀತಿಕಾರಮತಂ | ಭ್ರಾತೄಣಾಂ ಗೃಹೇ ಭ್ರಾತೄಣಾಮೇಕರಾತ್ರಂ. ಬಂಧುಗೃಹೇ ತೇಷಾಂ ನಾಸ್ತ್ಯಾಶೌಚಮಿತಿಚ ಕೇಚಿತ್ | ಗೃಹಾಂತರೇಪಿ ನಾಸ್ತ್ಯಾಶೌಚಮಿತಿಚ | ದ್ರಾವಿಡಾನಾಂತು ಗೃಹಾಂತರೇಪಿ ದ್ರವ್ಯಪ್ರದಾನಾದಿ ತದ್ವ್ಯಾಪಾರವಹನೇ ಪಿತ್ರೋಸ್ತ್ರಿರಾತ್ರಂ | ಭ್ರಾತೄಣಾಮಪಿ ತದ್ವ್ಯಾಪಾರವಹನೇ ತ್ರಿರಾತ್ರಂ| ಆಂಧ್ರಾಣಾಂ ಸ್ವಗೃಹೇ ಪುತ್ರ್ಯಾಃ ಕನ್ಯಕಾಜನನೇ ಪಕ್ಷಿಣೀತಿ ಕೇಚಿತ್ | ನಾಸ್ತ್ಯಾಶೌಚಮಿತಿ ಕೇಚಿತ್ | ಯಥಾಕುಲಾಚಾರಂ ವ್ಯವಸ್ಥಾ |

ಟೀ|| ತಂದೆಯುಮನೆಯಲ್ಲಿ ಮಗಳು ಹೆಣ್ಣುಮಗುವನ್ನಾಗಲೀ ಗಂಡುಮಗುವನ್ನಾಗಲೀ ಪ್ರಸವಿಸಿದರೆ ಹುಟ್ಟಿದ ಮಗುವಿನ ಮಾತಾಮಹ ಮಾತಾಮಹಿಯರಿಗೆ ಮೂರುದಿನ ಜಾತಾಶೌಚವು. (ಭ್ರಾತೃ) ಅಣ್ಣತಮ್ಮಂದಿರ ಮನೆಯಲ್ಲಿ ಪ್ರಸವಿಸಿದರೆ ಅಣ್ಣತಮ್ಮಂದಿರಿಗೆ ಮೂರುದಿವಸವು. ಪಿತೃವ್ಯಾದಿ ಬಂಧುಗೃಹದಲ್ಲಾದರೆ ಆ ಬಂಧುವಿಗೆ ಒಂದುದಿನ ಜಾತಾಶೌಚವು. ಗ್ರಾಮಾಂತರವಾದರೆ ಆಶೌಚವಿಲ್ಲ. ಅಣ್ಣತಮ್ಮಂದಿರ ಮನೆಯಲ್ಲಾದರೆ ಅಣ್ಣತಮ್ಮಂದಿರಿಗೆ ಒಂದುದಿನವೆಂದೂ, ಬಂಧುಗೃಹದಲ್ಲಾದರೆ ಬಂಧುಗಳಿಗೆ ಆಶೌಚವಿಲ್ಲವೆಂದೂ, ಕೆಲವರ ಮತವು. ಗೃಹಾಂತರದಲ್ಲೂ ಆಶೌಚವಿಲ್ಲ. ಏಳನೇ ತಿಂಗಳುಮೊದಲು ಗರ್ಭನಿರ್ಗಮನಕ್ಕೆ ಪ್ರಸೂತಿಯೆಂದು ಹೆಸರು. ಆಗಲೂ ಪುತ್ರೀಪ್ರಸವದಲ್ಲಿ ಮಾತಾಪಿತೃಗಳಿಗೆ ಮೂರುದಿನ ಜಾತಾಶೌಚವುಂಟೆಂದು ಪ್ರಾಚೀನಷಡಶೀತಿಕಾರರ ಮತವು. ತನ್ನ ಮನೆಯಲ್ಲಿ ಪುತ್ರಿಯು ಸ್ತ್ರೀಶಿಶುವನ್ನು ಪ್ರಸವಿಸಿದರೆ ಪಕ್ಷಿಣೀ ಎಂಬುದಾಗಿಯೂ, ಆಶೌಚವೇ ಇಲ್ಲವೆಂಬುದಾಗಿಯೂ, ಎರಡುಪಕ್ಷ. ದ್ರಾವಿಡಪಕ್ಷದಲ್ಲಾದರೋ

ಬೇರೇ ಗೃಹದಲ್ಲಾದರೂ ದ್ರವ್ಯದಾನಾದಿಗಳಿಂದ ಪ್ರಸವಭಾರ ವಹನಪಕ್ಷದಲ್ಲಿ ಮಾತಾಪಿತೃಗಳಿಗೆ ಮಾತ್ರ ಮೂರುದಿನವೆಂದೂ ಇದೆ. ತಮ್ಮತಮ್ಮ ಕುಲಾಚಾರದಂತೆ ವ್ಯವಸ್ಥೆಯು.

## ೪. ದಶಾಹಮಧ್ಯೇ ಪುತ್ರಜನನಶ್ರುತೌ.

ದಶಾಹಮಧ್ಯೇ ಪುತ್ರಜನನಂ ಶ್ರುತಂಚೇ ದ್ದಶಾಹಶೇಷೇಣೈವ ಶುದ್ಧಿಃ | ದಶಾಹಾದೂರ್ಧ್ವಂ ಶ್ರುತಂಚೇತ್ಪಿತುಃ ಸ್ನಾನಮಾತ್ರಂ | ನಭ್ರಾತ್ರಾದೀನಾಂ |

ಟೀ|| ಹತ್ತುದಿನಗಳೊಳಗೆ ಪುತ್ರಜನನ ಶ್ರವಣವಾದರೆ ತಂದೆಗೆ ಶೇಷದಿಂದಲೇ ಶುದ್ಧಿಯು. ಹತ್ತುದಿನಕ್ಕೆಮೇಲೆ ತಂದೆಗೆ ಸ್ನಾನಮಾತ್ರವು. ಭ್ರಾತ್ರಾದಿಗಳಿಗೆ ಸ್ನಾನವೂ ಇಲ್ಲ.

## ೫. ನಾಭಿಛೇದನಾತ್ಪ್ರಾಕ್ಶಿಶುಮರಣೇ.

ಜಾತಸ್ಯ ಶಿಶೋರ್ನಾಭಿಛೇದನಾತ್ಪೂರ್ವಂ ಮರಣೇ ಮಾತುರ್ದಶರಾತ್ರಂ ಜಾತಾಶೌಚಂ | ಪಿತ್ರಾದೀನಾಂ ಸರ್ವೇಷಾಂ ತ್ರಿರಾತ್ರಂ ಜಾತಾಶೌಚಂ | ದಶರಾತ್ರಂವೇತಿ ವಿಕಲ್ಪೋಽಭಿಹಿತಃ | ಅಭಿನವಷಡಶೀತೌ ಮೃತಾಶೌಚಂತು ಸ್ನಾನಮಾತ್ರಾನ್ನಿವೃತ್ತಂ | ವೃದ್ಧಮನುಃ—

ಶ್ಲೋ || ಜೀವನ್ಜಾತೋಯದಿತತೋ ಮೃತಸ್ಸೂತಕಏವತು |
ಸೂತಕಂ ಸಕಲಂ ಮಾತುಃ ಪಿತ್ರಾದೀನಾಂ ತ್ರಿರಾತ್ರಕಮಿತಿ |

ಯಥಾಕುಲಾಚಾರಂ ವ್ಯವಸ್ಥಾ—

ಟೀ|| ಹುಟ್ಟಿದಮಗುವು ನಾಭಿಛೇದನಾತ್ಪೂರ್ವದಲ್ಲಿ ಮೃತವಾದರೆ ತಾಯಿಗೆ ಹತ್ತುದಿನ ಜಾತಾಶೌಚವು. ಪಿತೃವಿಗೂ ಜ್ಞಾತಿಗಳಿಗೂ ತ್ರಿರಾತ್ರವೆಂಬುದಾಗಿಯೂ ದಶರಾತ್ರವೆಂಬುದಾಗಿಯೂ ಎರಡು ವಿಕಲ್ಪಗಳು ಹೇಳಲ್ಪಟ್ಟಿವೆ. ತನ್ನ ಕುಲಾಚಾರದಂತೆ ವ್ಯವಸ್ಥೆಯು. ಮೃತಾಶೌಚವಾದರೋ ಸ್ನಾನಮಾತ್ರದಿಂದ ಶುದ್ಧಿಯು.

## ೬. ನಾಭಿಛೇದನಾದೂರ್ಧ್ವಂ ಶಿಶುಮರಣೇ

ನಾಭಿಚ್ಛೇದನಾದೂರ್ಧ್ವಂ ಶಿಶುಮರಣೇ ಮಾತಾಪಿತೃ ಭ್ರಾತೄಣಾಂ ಜನ್ಮದಶಾಹಶೇಷ ಪರ್ಯಂತಂ ಮೃತಾಶೌಚಂ | ಜನ್ಮದಿನೇ ಮರಣೇ ದಶರಾತ್ರಂ | ದ್ವಿತೀಯ್ಯದಿನೇ ಮರಣೇ ನವರಾತ್ರಂ | ಅಷ್ಟರಾತ್ರಾದಿಕಮಿತ್ಯೂಹ್ಯಂ |

ಟೀ ॥ ನಾಭಿಚ್ಛೇದನಾನಂತರ ಶಿಶುಮರಣದಲ್ಲಿ ಮಾತಾಪಿತೃ ಭ್ರಾತೃಗಳಿಗೆ ಜನನದಿನ ಮೊದಲು ಶೇಷಪರ್ಯಂತ ಮೃತಾಶೌಚವು. ಜನ್ಮದಿನದಲ್ಲಿ ಮೃತಿಯಾದರೆ ಹತ್ತುದಿನವೂ, ದ್ವಿತೀಯ್ಯದಿನದಲ್ಲಿ ಮೃತಿಯಾದರೆ ಒಂಭತ್ತು ದಿನವೂ, ಇದರಿಂದ ಮುಂದೆಯೂ ಹೀಗೆಯೇ ಊಹಿಸತಕ್ಕದ್ದು.

## ೭ ದಶಾಹಾಭ್ಯಂತರೇ ಶಿಶುಮರಣೇ ಜ್ಞಾತೀನಾಂ ॥

ನಾಭಿಚ್ಛೇದನಾದೂರ್ಧ್ವಂ ದಶಾಹ್ಯಾಭ್ಯಂತರೇ ಶಿಶುಮರಣೇ ಜ್ಞಾತೀನಾಂತು ದಶರಾತ್ರಾದಿಕಂ ಜಾತಾಶೌಚಮೇವ । ಮೃತಾಶೌಚಂತು ಸ್ನಾನಮಾತ್ರಾನ್ನಿವೃತ್ತಂ ।

ಟೀ ॥ ನಾಭಿಚ್ಛೇದನವಾದಮೇಲೆ ಹತ್ತುದಿನದೊಳಗೆ ಶಿಶುಮರಣದಲ್ಲಿ ಜ್ಞಾತಿಗಳಿಗೆ ಹತ್ತುದಿನ ಜಾತಾಶೌಚಮಾತ್ರವೇ. ಮೃತಾಶೌಚವು ಸ್ನಾನಮಾತ್ರದಿಂದ ನಿವೃತ್ತಿಯು.

## ೮. ಗರ್ಭೇ ಮೃತಶಿಶುಜನನೇ.

ಗರ್ಭೇ ಮೃತಸ್ಸನ್ ಶಿಶುರ್ಜಾತಶ್ಚೇತ್ತದಾ ಮಾತುರ್ದಶರಾತ್ರಂ ಮೃತಾಶೌಚಂ । ಪಿತ್ರಾದೀನಾಂ ಸರ್ವೇಷಾಂ ದಶರಾತ್ರಾದಿಕಂ ಜಾತಾಶೌಚಮೇವ । ಮೃತಾಶೌಚಂ ಸ್ನಾನಮಾತ್ರಂ ।

ಟೀ ॥ ಗರ್ಭದಲ್ಲಿ ಪುರುಷಶಿಶು ಮೃತವಾಗಿ ಹುಟ್ಟಿದರೆ ತಾಯಿಗೆ ದಶರಾತ್ರ ಮೃತಾಶೌಚವು. ಪಿತ್ರಾದಿ ಸರ್ವಜ್ಞಾತಿಗಳಿಗೂ ದಶರಾತ್ರ ಜಾತಾಶೌಚವೇ. ಮೃತಾಶೌಚವು ಸ್ನಾನಮಾತ್ರ.

## ೯ ಸ್ತ್ರೀಶಿಶುವಿಷಯೇ

ನಾಭಿಚ್ಛೇದನಾತ್ಪೂರ್ವಂ ತದೂರ್ಧ್ವಂಚ ಸ್ತ್ರೀಶಿಶು ಮೃತೌ ಮೃತಜನನೇವಾ ಸರ್ವೇಷಾಂ ಜಾತಾಶೌಚಂ ದಶಾಹಮೇವ ।

ಟೀ ॥ ನಾಭಿಚ್ಛೇದನಾತ್ಪೂರ್ವದಲ್ಲಾಗಲೀ ಪರದಲ್ಲಾಗಲೀ ಸ್ತ್ರೀಶಿಶು ಮರಣದಲ್ಲೂ ಗರ್ಭದಲ್ಲೇ ಮೃತವಾಗಿ ಜನಿಸಿದರೂ ಪಿತ್ರಾದಿ ಸರ್ವಜ್ಞಾತಿಗಳಿಗೂ ಹತ್ತುದಿನ ಜಾತಾಶೌಚವೇ.

## ೧೦. ದಶಾಹಾದೂರ್ಧ್ವಂ ಬಾಲಮರಣೇ.

ಜನ್ಮದಶಾಹಾದೂರ್ಧ್ವಂ ಗರ್ಭಾಷ್ಟಮಾತ್ಪೂರ್ವಂ ಕನ್ಯಾಬಾಲಯೋರ್ಮ್ರರಣೇ ಮಾತಾಪಿತ್ರೋಃ ಭ್ರಾತೄಣಾಂ ಅನೂಢಭಗಿನೀನಾಂಚ ಖನನ ತ್ಯಾಗ ದಹನೇಷು ತ್ರಿಷ್ವಪಿ ಸಂಸ್ಕಾರೇಷು ತ್ರಿರಾತ್ರಮಾಶೌಚಂ | (N B —ಏತದ್ವಿಷಯೇ ದ್ರಾವಿಡಾನಾಂ ಭೇದಃ ತತ್ರ ದ್ರಷ್ಟವ್ಯಃ) ಆಂಧ್ರಾಣಾಂ ದಂತೋತ್ಪತ್ತೇಃ ಷಣ್ಮಾಸಾದ್ವಾ ಪೂರ್ವಂ ಸ್ತ್ರೀಶಿಶುಮರಣೇ ಭ್ರಾತೄಣಾಮೇಕರಾತ್ರಮಿತಿ ಕೇಷಾಂ ಚಿನ್ಮತಂ | ಪಿತ್ರೋರಪ್ಯೇಕರಾತ್ರಮಿತಿಚ |

ಟೀ || ಜನನಾದಿ ದಶಾಹಕ್ಕೆ ಮೇಲೆ ಗರ್ಭಾಷ್ಟಮಾತ್ಪೂರ್ವದಲ್ಲಿ ಕನ್ಯಾಬಾಲಕರ ಮೃತಿಯಲ್ಲಿ ಮಾತಾಪಿತೃಗಳಿಗೂ, ಭ್ರಾತೃಗಳಿಗೂ, ಅನೂಢಭಗಿನಿಯರಿಗೂ (ಮದುವೆಯಾಗದೆ ಇರುವ ಅಕ್ಕತಂಗಿಯರಿಗೂ) ಖನನ, ದಾಹ, ತ್ಯಾಗ ಈ ಮೂರು ವಿಧ ಸಂಸ್ಕಾರದಲ್ಲೂ ತ್ರಿರಾತ್ರಾಶೌಚವು. ಇಲ್ಲಿ ದ್ರಾವಿಡಪಕ್ಷದಲ್ಲಿ ಭೇದವಿದೆ ಅಲ್ಲಿ ನೋಡತಕ್ಕದ್ದು. ಆಂಧ್ರರಲ್ಲಿ ಆರುತಿಂಗಳಿಗೂ ಅಥವಾ ದಂತೋತ್ಪತ್ತಿಗೂ ಪೂರ್ವದಲ್ಲಿ ಸ್ತ್ರೀಶಿಶು ಮೃತಿಯಾದರೆ ಭ್ರಾತೃಗಳಿಗೆ ಒಂದುದಿನವೆಂದು ಮುಂದೆ ಕೆಲವರ್ರು ಹೇಳುತ್ತಾರೆ. ಮತ್ತು ತಾಯಿತಂದೆಗಳಿಗೂ ಆರು ತಿಂಗಳಿಗೆ ಮುಂಚೆ ಸ್ತ್ರೀಶಿಶು ಮೃತಿಯಲ್ಲಿ ಒಂದುದಿನಾಶೌಚವೆಂದು ಕೆಲವರು. ಅದು ಲೋಕದಲ್ಲಿ ಆಚಾರವಿಲ್ಲ. ಮೂರುದಿನವೇ ಆಚಾರದಲ್ಲಿದೆ.

### ಜ್ಞಾತೀನಾಂ ತು.

ಜ್ಞಾತೀನಾಂ ಜನ್ಮದಶಾಹಾದೂರ್ಧ್ವಂ ಷಣ್ಮಾಸಪರ್ಯಂತಂ ಸ್ನಾನಮಾತ್ರಂ | ಷಷ್ಠಮಾಸಪ್ರಭೃತಿ ಚೌಳಪರ್ಯಂತಮೇಕರಾತ್ರಂ | ಪ್ರಥಮಸಂವತ್ಸರ ಏವ ಚೌಳಂ ಕೃತಂಚೇತ್ ಚೌಳಪ್ರಭೃತಿ ತ್ರಿರಾತ್ರಂ | ತೃತೀಯವರ್ಷಪ್ರಭೃತಿ ಚೌಳೇ ಅಕೃತೇಪಿ ತ್ರಿರಾತ್ರಂ | ಪಂಚಮ ಸಂವತ್ಸರ ಏವ ಉಪನಯನಂ ಕೃತಂ ಚೇತ್ ತದಾರಭ್ಯ ಮಾತಾಪಿತೃ ಜ್ಞಾತೀನಾಂಚ ದಶರಾತ್ರಾದಿಕಮಾಶೌಚಂ | ಅಕೃತೋಪನಯನೇಪಿ ಗರ್ಭಾಷ್ಟಮವರ್ಷೇ ಮೃತೇ ಸರ್ವೇಷಾಂ ದಶಾಹಮಾಶೌಚಂ |

ಟೀ || ಹತ್ತುದಿನಕ್ಕೆಮೇಲೆ ಆರುತಿಂಗಳ ಪರ್ಯಂತವೂ ಕನ್ಯಾಬಾಲಕರ ಮರಣದಲ್ಲಿ ಜ್ಞಾತಿಗಳಿಗೆ ಸ್ನಾನಮಾತ್ರವು. ಆರನೇ ಮಾಸ (ತಿಂಗಳು) ಮೊದಲು ಚೌಳಪರ್ಯಂತವೂ ಒಂದುದಿನವು. ಪ್ರಥಮವರ್ಷದಲ್ಲಿ ಚೌಳ ಮಾಡಿದ್ದರೆ ಆ ಕಾಲ

ಮೊದಲು ಮೂರು ದಿನವು. ಮೂರನೇ ವರ್ಷದಲ್ಲಿ ಚೌಳ ಮಾಡದೇ ಇದ್ದರೂ ತ್ರಿರಾತ್ರವು (ಮೂರು ದಿನ). ಒಂದನೇ ವರ್ಷದಲ್ಲಿ ಉಪನಯನ ಮಾಡಿದರೆ ಅದಕ್ಕೆ ಅನಂತರ ಪಿತ್ರಾದಿ ಸರ್ವಜ್ಞಾತಿಗಳಿಗೂ ಪೂರ್ಣಾಶೌಚವು. ಉಪನಯನ ವಿಲ್ಲದಿದ್ದರೂ ಗರ್ಭಾಷ್ಟಮ ವರ್ಷಕ್ಕೆ ಮೇಲೆ ಎಲ್ಲರಿಗೂ ಪೂರ್ಣಾಶೌಚವು.

## ೧೧. ಸಂಸ್ಕಾರಕ್ರಮಃ | ಕನ್ಯಾಮರಣೇಚ.

ಜನ್ಮದಶಾಹಾದೂರ್ಧ್ವಂ ತೃತೀಯ್ಯವರ್ಷ ಪರ್ಯಂತಂ ಖನನಮೇವ ಸಂಸ್ಕಾರಃ | ದಂತಜನನಾದೂರ್ಧ್ವಂ ಚೌಲ ಪರ್ಯಂತಂ ತ್ಯಾಗ, ದಹನ, ಸಂಸ್ಕಾರಯೋರ್ವಿಕಲ್ಪಃ | ತೃತೀಯ್ಯವರ್ಷಪ್ರಭೃತಿ ಚೌಳಾಭಾವೇಪಿ ದಹನಮೇವ ಸಂಸ್ಕಾರಃ | ದಂತಜನನಾತ್ಪೂರ್ವಂ ದಾಹಪಕ್ಷೇ ಜ್ಞಾತೀನಾಮೇಕಾಹಂ | ಚೌಲಾತ್ಪೂರ್ವಂ ದಾಹಪಕ್ಷೇ ಜ್ಞಾತೀನಾಂ ತ್ರ್ಯಹಂ | ಜನ್ಮದಶಾಹಾದೂರ್ಧ್ವಂ ಷಣ್ಮಾಸಾತ್ಪೂರ್ವಂ ಸ್ತ್ರೀಶಿಶು ಮರಣೇ ಮಾತಾಪಿತ್ರೋರೇಕರಾತ್ರಂ | ತ್ರಿರಾತ್ರಮಿತ್ಯನ್ಯೇ | ದಂತೋತ್ಪತ್ತೇಃ ಷಣ್ಮಾಸಾದ್ವಾ ಪರಂ ಭ್ರಾತೄಣಾಂ ತ್ರಿರಾತ್ರಂ | ತತ್ಪ್ರಾಕ್ ಏಕಾಹಂ | ಷಣ್ಮಾಸಾದೂರ್ಧ್ವಂ ವಿವಾಹಪರ್ಯಂತಂ ತ್ರಿರಾತ್ರಂ | ಜ್ಞಾತೀನಾಂ ಜನ್ಮದಶಾಹಾದೂರ್ಧ್ವಂ ವರ್ಷದ್ವಯಪೂರ್ತಿಪರ್ಯಂತಂ ಸ್ನಾನಮಾತ್ರಂ | ವರ್ಷದ್ವಯಾದೂರ್ಧ್ವಂ ವಾಗ್ದಾನಪರ್ಯಂತಂ ಏಕರಾತ್ರಂ | ತದೂರ್ಧ್ವಂ ವಿವಾಹಪರ್ಯಂತಂ ಪಿತೃ, ಭರ್ತೃ, ಕುಲಯೋರಪಿ ತ್ರಿರಾತ್ರಂ | ವಾಗ್ದಾನೋತ್ತರಂ ವಿವಾಹಾಭಾವೇತು ವರಜ್ಞಾತೀನಾಂ ನಾಸ್ತ್ಯೇಕೇ |

ಟೀ || ಹುಟ್ಟಿದ ಹತ್ತು ದಿನಕ್ಕೆ ಮೇಲೆ ಮೂರು ವರ್ಷದವರೆಗೂ ಖನನ ಸಂಸ್ಕಾರವು. ಹಲ್ಲುಹುಟ್ಟಿದ ಮೇಲೆ ಚೌಳಪರ್ಯಂತವೂ ತ್ಯಾಗ, ದಹನ ಸಂಸ್ಕಾರ ವಿಕಲ್ಪವು. ಮೂರನೇ ವರ್ಷ ಮೊದಲು ಚೌಲವಿಲ್ಲದೇ ಇದ್ದರೂ ದಹನಸಂಸ್ಕಾರವೇ. ಕದಾಚಿತ್ ಹಲ್ಲುಹುಟ್ಟುವುದಕ್ಕೆ ಮೊದಲು ದಹನಮಾಡಿದಪಕ್ಷ ಜ್ಞಾತಿಗಳಿಗೆ ಒಂದು ದಿನವು. ಚೌಲಾತ್ಪೂರ್ವದಲ್ಲಿ ದಹನಪಕ್ಷದಲ್ಲಿ ಜ್ಞಾತಿಗಳಿಗೆ ತ್ರಿರಾತ್ರವು. ಸ್ತ್ರೀಶಿಶುಮರಣದಲ್ಲಿ ಹುಟ್ಟಿದ ಹತ್ತುದಿವಸಕ್ಕೆ ಮೇಲೆ ಆರುತಿಂಗಳವರೆಗೂ ಮಾತಾಪಿತೃಗಳಿಗೆ ಏಕರಾತ್ರವು. ತ್ರಿರಾತ್ರವೆಂದು ಕೆಲವರು. ಹಲ್ಲುಹುಟ್ಟಿದ ಮೇಲಾಗಲೀ ಆರು ತಿಂಗಳಿಗೆ ಮೇಲಾಗಲೀ ಕನ್ಯಾಶಿಶುಮರಣದಲ್ಲಿ ಅಣ್ಣತಮ್ಮಂದಿರಿಗೂ ತ್ರಿರಾತ್ರವು. ಅದಕ್ಕೆ ಪೂರ್ವದಲ್ಲಿ ಒಂದುದಿನವು. ಆರುತಿಂಗಳಿಗೆ ಮೇಲೆ

ವಿವಾಹಪರ್ಯಂತವೂ ತ್ರಿರಾತ್ರವು. ಜ್ಞಾತಿಗಳಿಗಾದರೋ ಹತ್ತುದಿವಸಕ್ಕೆ ಮೇಲೆ ಎರಡುವರ್ಷ ಪೂರ್ತಿಯಾಗುವ ಪರ್ಯಂತವೂ ಕನ್ಯಾಮರಣದಲ್ಲಿ ಸ್ನಾನಮಾತ್ರವು. ಎರಡು ವರ್ಷಕ್ಕೆ ಮೇಲೆ ವಾಗ್ದಾನಪರ್ಯಂತವೂ ಒಂದು ದಿನವು. ವಾಗ್ದಾನಕ್ಕೆ ಮೇಲೆ ವಿವಾಹಪರ್ಯಂತವೂ ಕನ್ಯೆಯಪಿತೃ ವರ ಈ ಎರಡು ಕುಲದವರಿಗೂ ತ್ರಿರಾತ್ರವು. ವಾಗ್ದಾನವಾಗಿದ್ದರೂ ವಿವಾಹವಿಲ್ಲದಿದ್ದರೆ ವರನಿಗೂ ಅವನ ಜ್ಞಾತಿಗಳಿಗೂ ಇಲ್ಲವೆಂದು ಕೆಲವರ ಮತವು.

## ೧೨. ಸಮಾನೋದಕಾನಾಂ.

ಸಮಾನೋದಕಾನಾಂ ತ್ರಿರಾತ್ರಮಧ್ಯೇ ಜನನಶ್ರವಣೇ ಶೇಷೇಣಶುದ್ಧಿಃ | ಸಮಾನೋದಕಾನಾಂ ಜಾತಾಶೌಚಂ ನಾಸ್ತೀತ್ಯನ್ಯೇ | ಅನುಪನೀತಮರಣೇ ಸ್ನಾನಮಾತ್ರಂ | ಅತಿಕ್ರಾಂತಾಶೌಚಂತು ಪಿತ್ರಾದೀನಾಮಪಿ ನಾಸ್ತಿ | ಸ್ನಾನಮಾತ್ರಂ | ಇದಂ ಸರ್ವವರ್ಣಾನಾಂ ಸಾಧಾರಣಂ | ಕ್ಷತ್ರಿಯಾದೀನಾಂ ಅಷ್ಟಮವರ್ಷಾತ್ಪೂರ್ವಂ |

ಶ್ಲೋ || ಅದಂತಜನನಾತ್ಸದ್ಯಃ ಆಚೌಳಾನ್ನೈಶಿಕೀ ಸ್ಮೃತಾ |
ತ್ರಿರಾತ್ರಮಾವ್ರತಾದೇಶಾತ್................||

ಇತ್ಯಾದಿಕಂ ಬ್ರಾಹ್ಮಣವದೇವ | ನತುಭೇದಃ | ತದೂರ್ಧ್ವಂ ಸ್ವಜಾತ್ಯುಕ್ತಂ ಪೂರ್ಣಮಾಶೌಚಂ | ಕ್ಷತ್ರಿಯವೈಶ್ಯಯೋಃ ಗರ್ಭಾಷ್ಟಮವರ್ಷೇ ಮರಣೇ ಬ್ರಾಹ್ಮಣವತ್ಪೂರ್ಣಾಶೌಚಂ | ಶೂದ್ರಸ್ಯತು ಗರ್ಭಸಪ್ತಮಪ್ರಭೃತಿ ಪೂರ್ಣಂ | ಅಷ್ಟಮ, ದ್ವಾದಶ, ಷೋಡಶ ವರ್ಷಾತ್ಪರಂ ಪೂರ್ಣಮಿತಿ ದೇಶಭೇದೇಷು |

ಟೀ|| ಸಮಾನೋದಕರುಗಳಿಗೆ ಮೂರುದಿನದೊಳಗೆ ಜನನವು ಶ್ರವಣವಾದರೆ ಶೇಷದಿನದಿಂದ ಶುದ್ಧಿಯು | ಸಮಾನೋದಕರುಗಳಿಗೆ ಜಾತಾಶೌಚವಿಲ್ಲವೆಂದು ಕೆಲವರಮತವು | ಅನುಪನೀತನ ಮರಣದಲ್ಲಿ ಸ್ನಾನಮಾತ್ರದಿಂದ ಶುದ್ಧಿಯು | ಅತಿಕ್ರಾಂತಾಶೌಚವು ಪಿತ್ರಾದಿಗಳಿಗೂ ಸಹ ಇಲ್ಲ. ಸ್ನಾನಮಾತ್ರವು. ಇದು ಎಲ್ಲಾವರ್ಣದವರಿಗೂ ಸಮಾನವು. ಕ್ಷತ್ರಿಯಾದಿಗಳಿಗೆ ಎಂಟುವರ್ಷಕ್ಕೆ ಮೊದಲು ಹೇಗೆಂದರೆ—ಹಲ್ಲುಹುಟ್ಟುವುದಕ್ಕೆಮುಂಚೆ ಸದ್ಯಶ್ಶುದ್ಧಿಯು; ಚೌಳದವರೆಗೆಒಂದುದಿನವು; ಅದಕ್ಕೆಮೇಲೆ ಉಪನಯನಪರ್ಯಂತ ಮೂರುದಿನವು; ಇವು ಬ್ರಾಹ್ಮಣರಂತೆಯೇ. ಭೇದವಿಲ್ಲ. ಉಪನಯನಾನಂತರ ಸ್ವಜಾತ್ಯುಕ್ತ ಪೂರ್ಣಾಶೌಚವು. ಕ್ಷತ್ರಿಯವೈಶ್ಯರುಗಳಿಗೆ ಗರ್ಭಾಷ್ಟಮವರ್ಷದಲ್ಲಿ ಮರಣವಾದರೆ ಬ್ರಾ

ಹ್ಮಣನಂತೆ ಪೂರ್ಣಾಶೌಚವು. ಶೂದ್ರನಿಗಾದರೋ ಗರ್ಭಸಪ್ತಮವರ್ಷವೊದಲು ಪೂರ್ಣಾಶೌಚವು. ಎಂಟು, ಹನ್ನೆರಡು, ಹದಿನಾರು, ವರ್ಷಗಳಮೇಲೆ ಕ್ಷತ್ರಿಯ, ವೈಶ್ಯ, ಶೂದ್ರರಿಗೆ, ಕ್ರಮವಾಗಿ ಪೂರ್ಣಾಶೌಚವೆಂದು ದೇಶಭೇದಾಚಾರವು. ಯಾವದೇಶದಲ್ಲಿ ಯಾವಆಚಾರವಿದೆಯೋ ಅಲ್ಲಿ ಅದರಂತೆಯೇ ನಡೆಯಬೇಕು.

(N B.—ಸಮಾನೋದಕರೆಂದರೆ ಏಳುತಲೆಕಳೆದದಾಯಾದಿಗಳು)

## ೧೩. ಉಪನೀತಮರಣಾಶೌಚಂ.

ಉಪನೀತಮರಣೇ ಸಪಿಂಡಾನಾಂ ದಶರಾತ್ರಂ| ಸಮಾನೋದಕಾನಾಂ ತ್ರಿರಾತ್ರಂ| ಸಗೋತ್ರಾಣಾಂ ಸ್ನಾನಮಾತ್ರಂ| ಜನ್ಮ ನಾಮ ಸ್ಮೃತಿಮತಾಂ ಸಗೋತ್ರಾಣಾಮೇಕರಾತ್ರಂ|

ಟೀ|| ಉಪನೀತನಾದವನ ಮರಣದಲ್ಲಿ ಜ್ಞಾತಿಗಳಿಗೆ ಹತ್ತುದಿನಾಶೌಚವು. ಸಮಾನೋದಕರುಗಳಿಗೆ ಮೂರುದಿನವು. ಸಗೋತ್ರರಿಗೆ ಸ್ನಾನಮಾತ್ರವು. ಉತ್ಪತ್ತಿ ಹೆಸರು ಇವು ಗೊತ್ತಾಗಿ ಬಹಳಹಿಂದಿನ ನಮ್ಮಜ್ಞಾತಿಗಳೆಂದು ಜ್ಞಾಪಕವುಳ್ಳವರಿಗೆ ಒಂದುದಿನವು. ಸಪಿಂಡರೆಂದರೆ ಏಳುತಲೆಯೊಳಗೆ ಇರುವ ಜ್ಞಾತಿಗಳು. ಸಮಾನೋದಕರೆಂದರೆ ಎಂಟನೇತಲೆವೊದಲು ಹದಿನಾಲ್ಕು ತಲೆವರೆಗೆ ಇರುವ ಜ್ಞಾತಿಗಳು. ಸಗೋತ್ರರೆಂದರೆ ಹದಿನಾಲ್ಕಕ್ಕೆಮೇಲೆ ಇಪ್ಪತ್ತೊಂದುತಲೆವರೆಗೆ ಗುರುತು ಜ್ಞಾಪಕವುಳ್ಳ ಜ್ಞಾತಿಗಳು. ಜ್ಞಾತಿಗಳಲ್ಲದೆ ಒಂದೇಗೋತ್ರದವರಿಗೂ ಸಗೋತ್ರರೆಂದು ಹೆಸರು.

## ೧೪. ದಶಾಹಮಧ್ಯೇ ಆಶೌಚಶ್ರವಣೇ.

ದಶಾಹಮಧ್ಯೇ ಜನನಮರಣಯೋಃಶ್ರವಣೇ ಜ್ಞಾತೀನಾಂ ದಶಾಹಶೇಷೇಣೈವ ಶುದ್ಧಿಃ|

ಟೀ|| ಹತ್ತು ದಿನದೊಳಗೆ ಜನನ ಮರಣ ಶ್ರವಣದಲ್ಲಿ ಜ್ಞಾತಿಗಳಿಗೆ ಹತ್ತು ದಿನದ ಶೇಷದಿಂದಲೇ ಶುದ್ಧಿಯು.

## ೧೫ ದಶಾಹಾದೂರ್ಧ್ವಂ ಪಿತ್ರೋಃಮೃತಿಶ್ರವಣೇ ಪುತ್ರಾಣಾಂ ಜ್ಞಾತೀನಾಂ ಚ.

ದಶಾಹಾದೂರ್ಧ್ವಂ ಪಿತೃ, ಮಾತೃ, ಮರಣಶ್ರವಣೇ ವಿಂಶತಿವತ್ಸರಪರ್ಯಂತಂ ಪುತ್ರಾಣಾಂ ಮೃತಸ್ಯ ಪಶ್ಚಾದ್ವೃಷ್ಟೇ ಶ್ರವಣಪ್ರಭೃತಿ ದಶರಾತ್ರಂ| ಜ್ಞಾತೀ

ನಾಂತು ತ್ರಿಮಾಸಾದರ್ವಾಕ್ ತ್ರಿರಾತ್ರಂ | ಚತುರ್ಥಮಾಸಮಾರಭ್ಯ ಷಣ್ಮಾಸ ಪರ್ಯಂತಂ ಪಕ್ಷಿಣೀ | ಪಕ್ಷಿಣೀಶಬ್ದಸ್ತು ದಿವಾಮರಣೇ ದ್ವಾಭ್ಯಾಮಹೋಭ್ಯಾಂ ಯುಕ್ತಾರಾತ್ರಿಃ ಪಕ್ಷಿಣೀ | ರಾತ್ರಿಮರಣೇ ರಾತ್ರಿದ್ವಯಯುಕ್ತಮಹಃ ಪಕ್ಷಿಣೀ | ಷಣ್ಮಾಸಮಾರಭ್ಯ ನವಮಮಾಸಪರ್ಯಂತಂ ಏಕರಾತ್ರಂ | ಅತಊರ್ಧ್ವಂ ಸ್ನಾನಮಾತ್ರಂ | ತ್ರಿಮಾಸಾದರ್ವಾಕ್ ತ್ರಿರಾತ್ರಮಿತ್ಯಾದ್ಯಾಶೌಚಂ ಏಕದೇಶ ವಿಷಯಂ ; ದೇಶಾಂತರೇತು ದಶಾಹಾತ್ಪರಂ ಜ್ಞಾತಿಮೃತಿಶ್ರವಣೇ ಸ್ನಾನಮೇವೇತಿ ಪ್ರಾಚೀನ ಷಡಶೀತಿಕಾರಮತಂ| ಅಯಮಾಚಾರಃ ಪ್ರಾಯಶೋ ನಾತ್ರದೃಶ್ಯತೇ| ಕಿಂಚ ಪೂರ್ವಮಗೃಹೀತಾಶೌಚಾನಾಂ ಸಪಿಂಡಾನಾಂ ಪುನಃ ಕ್ರಿಯಾರಂಭ ಕಾಲೇ ಅನೇಕಾಬ್ದಾಂತರಾಯೇ ಸತ್ಯಪಿ ತ್ರಿದಿನಮಾಶೌಚಮಿತಿಚ ಪ್ರಾಚೀನಷಡ ಶೀತೌ | ವತ್ಸರಾತ್ಪರಂ ಸ್ನಾನಮೇವೇತಿ ಬಹುಮತಂ | ಯಥೋಚಿತಮತ್ರ ಗ್ರಾಹ್ಯಂ |

ಟೀ || ಹತ್ತು ದಿನಕ್ಕೆ ಮೇಲೆ ಮಾತಾಪಿತೃ ಮರಣಶ್ರವಣಗಲ್ಲಿ ಇಪ್ಪತ್ತು ವರ್ಷಗಳವರೆಗೂ, ಪುತ್ರರುಗಳಿಗೂ, ಪರಸ್ಪರದಂಪತಿಗಳಿಗೂ, ಶ್ರವಣದಿನ ಮೊದಲು ದಶರಾತ್ರವು. ಇದು ಸಪತ್ನಿಯರುಗಳಿಗೂ ಪರಸ್ಪರವುಂಟೆಂದು ಕೆಲವರು ಹೇಳುವರು. ಜ್ಞಾತಿಗಳಿಗಾದರೋ ಮೂರು ತಿಂಗಳವರೆಗೂ ತ್ರಿದಿನವು. ನಾಲ್ಕನೇ ಮಾಸ ಮೊದಲು ಆರು ತಿಂಗಳವರೆಗೂ ಪಕ್ಷಿಣಿಯು. ' ಪಕ್ಷಿಣೀ ' ಎಂದರೆ ಹಗಲಾಗಿದ್ದರೆ ಎರಡು ಹಗಲು ಒಂದುರಾತ್ರಿ ಸೇರಿದಕಾಲವು. ರಾತ್ರಿಯಾಗಿದ್ದರೆ ಎರಡು ರಾತ್ರಿ ಒಂದು ಹಗಲು ಸೇರಿದಕಾಲವು. ಆರು ಮಾಸಕ್ಕೆ ಮೇಲೆ ಒಂಭತ್ತು ಮಾಸದವರೆಗೆ ಒಂದು ದಿನವು. ಅದಕ್ಕೆ ಮೇಲೆ ಸ್ನಾನಮಾತ್ರವು. ಇದು ಒಂದೇ ದೇಶದ ವಿಷಯವು. ಭಿನ್ನದೇಶವಾಗಿದ್ದರೆ ಹತ್ತು ದಿನಕ್ಕೆ ಮೇಲೆ ದೇಶಾಂತರ ಮೃತಿಶ್ರವಣದಲ್ಲಿ ಜ್ಞಾತಿಗಳಿಗೆ ಒಂದು ಸ್ನಾನವೆಂದು ಪ್ರಾಚೀನಷಡಶೀತಿ ಮತವು. ಇದು ಆಂಧ್ರ, ದ್ರಾವಿಡ, ಕರ್ಣಾಟಕ ದೇಶಗಳಲ್ಲಿ ಆಚರಣೆಯಲ್ಲಿಲ್ಲ. ಮತ್ತು ಮೊದಲು ಆಶೌಚಾನುಷ್ಠಾನಮಾಡದೇ ಇರುವ ಜ್ಞಾತಿಗಳಿಗೆ ಕ್ರಿಯಾರಂಭಕಾಲದಲ್ಲಿ ಅನೇಕ ವರ್ಷಗಳು ಕಳೆದಿದ್ದಾಗ್ಯೂ ಜ್ಞಾತಿಗಳಿಗೆ ತ್ರಿರಾತ್ರಾಶೌಚವೆಂದು ಪ್ರಾಚೀನ ಷಡಶೀತಿಮತವು. ಒಂದು ವರ್ಷಕ್ಕೆ ಮೇಲೆ ಸ್ನಾನವೆಂದು ಬಹುಮತವು. ಯಾರಲ್ಲಿ ಯಾವುದು ಆಚರಣೆಯಲ್ಲಿದೆಯೋ ಅವರು ಅದನ್ನು ಗ್ರಹಿಸತಕ್ಕದ್ದು.

## ೧೩. ದಶಾಹಮಧ್ಯೇ ಪಿತ್ರೋರ್ಮೃತಿಶ್ರುತೌ ಪುತ್ರಾಣಾಂ.

ದಶಾಹಾಭ್ಯಂತರಏವ ಪಿತ್ರೋರ್ಮರಣಶ್ರವಣೇ ಪುತ್ರಾಣಾಂ ಜ್ಞಾತೀನಾಂಚ ದಶಾಹಶೇಷೇಣ ಶುದ್ಧಿಃ | ತಥಾಚಮನುಃ :—

ಶ್ಲೋ || ವಿಗತಂತು ವಿದೇಶಸ್ಥಂ ಶೃಣುಯಾದ್ಯೋಹ್ಯನಿರ್ದಶಂ |
ಯಚ್ಛೇಷಂದಶರಾತ್ರಸ್ಯ ತಾವದೇವಾಶುಚಿರ್ಭವೇತ್ ||
ದೇಶಾಂತರಗತಂಶ್ರುತ್ವಾ ಕಲ್ಯಾಣಂ ಮರಣಂ ತಥಾ |
ಯಚ್ಛೇಷಂ ದಶರಾತ್ರಸ್ಯ ತಾವದೇವಾಶುಚಿರ್ಭವೇತ್ ||

ಯಾಜ್ಞವಲ್ಕ್ಯೇಪಿ :—ಶ್ಲೋ || "ಪ್ರೋಷಿತೇ ಕಾಲಶೇಷಸ್ಸ್ಯಾತ್" ಇತ್ಯಾದಿಭಿಃ ದಶಾಹಮಧ್ಯೇ ಪಿತ್ರೋರ್ಮರಣಶ್ರವಣೇ ದಶಾಹಶೇಷೇಣ ಶುದ್ಧಿರುಕ್ತಾ | ಕೇಚಿತ್ತು ದಶಾಹಾಭ್ಯಂತರೇಪಿ ಚತುರ್ದಿವಸಾದರ್ವಾಕ್ ಪಿತ್ರೋರ್ಮರಣಶ್ರವಣೇ ದಶಾಹಶೇಷೇಣ ಶುದ್ಧಿಃ | ತದೂರ್ಧ್ವಂತು ಶ್ರವಣಪ್ರಭೃತಿ ದಶರಾತ್ರಮಿತ್ಯಾಹುಃ | ತತ್ಸಂಪ್ರದಾಯಃ ಯತ್ತು ||

ಶ್ಲೋ || ಪಿತ್ರೋರ್ಮೃತೌಚೇದ್ದೂರಸ್ಥಃ ಶ್ರುತ್ವಾ ಪಿತೃವಿಪರ್ಯಯಂ |
ಪುತ್ರಶ್ಶುದ್ಧ್ಯೇದ್ದಶಾಹೇನ ಸಂಚಯಾತ್ಪ್ರಾಕ್ತು ಶೇಷತಃ ||

ಇತಿವಚನಂ ಚೋದಾಹರಂತಿ | ತದ್ದ್ರಾವಿಡದೇಶ ವಿಷಯಮಿತ್ಯಭಿನವ ಷಡಶೀತೌ | ಸಂಚಯಾತ್ಪೂರ್ವಂ ಪರಂವಾ ಪಿತ್ರೋರ್ಮರಣಶ್ರವಣೇ ಸರ್ವಪುತ್ರಾಣಾಮಪಿ ಶೇಷೇಣೈವ ಶುದ್ಧಿರಿತಿ ಪ್ರಾಚೀನಷಡಶೀತೌ | ಏವಂ ಕೇಚನಾಂಧ್ರಾ ಆಚರಂತಿ | ಸಂಚಯನಾತ್ಪರಂ ಶ್ರವಣೇ ಶ್ರವಣಾದಿ ದಶಾಹಂ ಕೇಚನಾಂಧ್ರಾ ಅನುಷ್ಠಾಸ್ಯಂತಿ | ಮಧ್ವಾಚಾರ್ಯ ಮತಾವಲಂಬಿನಾಂತು ತದೀಯ ಛಲಾರಿನೃಸಿಂಹಾರ್ಯಕೃತ ಸ್ಮೃತಿಸಂಗ್ರಹೇ ಅಂತರ್ದಶಾಹೇ ಪಿತ್ರೋರ್ಮರಣಶ್ರವಣೇ ಸಂಚಯಾತ್ಪೂರ್ವಂ ಪರಂವಾ ಮರಣಾದಿ ದಶಾಹಶೇಷೇಣೈವ ಶುದ್ಧಿರಭಿಹಿತಾ | ತಥೈವಾಚರಂತಿಚ | ಏತದ್ವಿಷಯೇ ದ್ರಾವಿಡಪಕ್ಷಾಶೌಚಲೇಖನೇ ವಿಸ್ತರತೋ ದೃಶ್ಯತೇ | ತತ್ರ ದ್ರಷ್ಟವ್ಯಂ |

ಟೀ || ಹತ್ತು ದಿವಸದೊಳಗೆ ಮಾತಾಪಿತೃಗಳ ಮೃತಿಶ್ರವಣವಾದರೆ ಪುತ್ರರಿಗೂ, ಜ್ಞಾತಿಗಳಿಗೂ ಸಹ ದಶಾಹಶೇಷದಿಂದಲೇ ಶುದ್ಧಿಯು. ಕೆಲವರು ಹತ್ತು ದಿವಸದೊಳಗಾಗಿದ್ದರೂ ನಾಲ್ಕು ದಿನಗಳೊಳಗಾಗಿ ಶ್ರವಣವಾದರೆ ಪುತ್ರರಿಗೂ

ದಶಾಹಶೇಷದಿಂದ ಶುದ್ಧಿಯೆಂಬುದಾಗಿಯೂ ಅದಕ್ಕೆ ಮೇಲಾದರೆ ಕೇಳಿದ ಕಾಲ ಮೊದಲು ದಶಾಹವೆಂದೂ ಹೇಳುತ್ತಾರೆ. ಅದು ಒಂದು ಸಂಪ್ರದಾಯವು. ಸಂಚಯನಾತ್ಪರದಲ್ಲಿ ಶ್ರವಣವಾದರೆ ಶ್ರವಣಾದಿ ದಶಾಹಾನುಷ್ಠಾನವು ದ್ರಾವಿಡದೇಶ ವಿಷಯವೆಂದು ಷಡಶೀತಿಕಾರರ ಮತವು. ಸಂಚಯನಾತ್ಪೂರ್ವದಲ್ಲಾಗಲೀ ಪರದಲ್ಲಾಗಲೀ, ಹತ್ತು ದಿನದೊಳಗೆ ಕೇಳಿದರೆ ಶೇಷದಿಂದ ಶುದ್ಧಿಯೆಂದು ಅಭಿನವ ಷಡಶೀತಿಕಾರರ ಮತವು. ಮತ್ತು ಸಂಚಯನಾತ್ಪರದಲ್ಲಿ ಶ್ರವಣವಾದರೆ ಶ್ರವಣಾದಿ ದಶಾಹವನ್ನೂ ಕೆಲವು ಆಂಧ್ರರು ಅನುಷ್ಠಾನಮಾಡುತ್ತಾರೆ. ಮಧ್ವಾಚಾರ್ಯರ ಮತಾವಲಂಬಿಗಳಿಗಾದರೋ ಅವರ ಛಲಾರಿನೃಸಿಂಹಾಚಾರ್ಯ ಸ್ಮೃತಿಸಂಗ್ರಹದಲ್ಲಿ ಸಂಚಯನಾತ್ಪೂರ್ವದಲ್ಲಾಗಲೀ ಪರದಲ್ಲಾಗಲೀ ಅಂತರ್ದಶಾಹದಲ್ಲಿ ಶ್ರುತವಾದರೆ ಸರ್ವಪುತ್ರರಿಗೂ ಶೇಷದಿಂದಲೇ ಶುದ್ಧಿಯೆಂದು ಹೇಳಲ್ಪಟ್ಟಿದೆ. ಅದೇರೀತಿ ಅವರ ಆಚಾರದಲ್ಲೂ ನಡೆದುಬರುತ್ತಿದೆ.

N B — ಈ ವಿಷಯದಲ್ಲಿ ದ್ರಾವಿಡಪಕ್ಷದಲ್ಲಿ ವಿಶೇಷವಾಗಿ ಬರೆದು ಇದೆ. ಅಲ್ಲಿ ನೋಡಬಹುದು.

### ೧೭. ಪುತ್ರ್ಯಾದಿಮರಣೇ.

ಪುತ್ರಿಕಾ, ಭಗಿನೀ, ಭ್ರಾತೃಮರಣೇ ತತ್ಪ್ರತಿಯೋಗಿನಾಂ ದಶಾಹಾಭ್ಯಂತರಶ್ರವಣೇ ಪಕ್ಷಿಣೀ | ತದೂರ್ಧ್ವಮೇಕರಾತ್ರಂ | ದಶಾಹಾಭ್ಯಂತರೇ ತ್ರಿರಾತ್ರಂ | ತದೂರ್ಧ್ವಂ ಪಕ್ಷಿಣೀತಿ ವಿಕಲ್ಪೇನ ಧರ್ಮಪ್ರವೃತ್ತ್ಯಾದೌ ಪ್ರತಿಪಾದಿತಂ | ನಿಬಂಧನಕಾರೈಃ ವಿಜ್ಞಾನೇಶ್ವರಾದಿಭಿಃ ನಿರಾಕೃತಂಚ | ಷಡಶೀತಿಕಾರ ವೈದ್ಯನಾಥಾದಿಪಕ್ಷೇತು ಸನ್ನಿಧಾನೇ ತ್ರಿರಾತ್ರಂ | ಅಸನ್ನಿಧಾನೇ ಪಕ್ಷಿಣೀತಿ ಆಂಧ್ರಪಕ್ಷಃ | ಅಸನ್ನಿಧಾನೇಪಿ ತ್ರಿರಾತ್ರಮಿತಿ ದ್ರಾವಿಡಪಕ್ಷಃ | ಷಡಶೀತಿ ವೈದ್ಯನಾಥಯೋಃ ಪಕ್ಷೇ ತ್ರಿರಾತ್ರ, ಪಕ್ಷಿಣೀ, ದಿನಾಶೌಚಾನಾಂ ಸ್ವಸ್ವಕಾಲಾತಿಕ್ರಮೇ ಸ್ನಾನಮಾತ್ರಂ | ಶತಕೇ ಸ್ವಕಾಲಾತಿಕ್ರಮೇಪಿ ಅಂತರ್ದಶಾಹೇ ತ್ರ್ಯಹಾಶೌಚಿನಾಂ ದಿನಂ | ಪಕ್ಷಿಣ್ಯಾಶೌಚಿನಾಮೇಕಕಾಲಃ | ದಿನಾಶೌಚಿನಾಂ ಸ್ನಾನಮಿತ್ಯುಕ್ತಂ | ಯಥಾಕುಲಾಚಾರಂ ವ್ಯವಸ್ಥಾ |

ಟೀ || ಸ್ತ್ರೀಗೆ ಮಗಳು, ಅಕ್ಕತಂಗಿಯರು, ಅಣ್ಣತಮ್ಮಂದಿರು, ಇವರ ಮರಣದಲ್ಲಿ ತತ್ಪ್ರತಿಯೋಗಿಗಳಿಗೆ ದಶಾಹದೊಳಗೆ ಶ್ರುತವಾದರೆ ಒಂದು ದಿನವೆಂದೂ ತ್ರಿರಾತ್ರವೆಂದೂ ತದೂರ್ಧ್ವದಲ್ಲಿ ಪಕ್ಷಿಣೀ ಎಂದೂ ವಿಕಲ್ಪವಾಗಿ ಧರ್ಮ

ಪ್ರವೃತ್ತ್ಯಾದಿ ಗ್ರಂಥಗಳಲ್ಲಿ ಹೇಳಿದೆ. ನಿಬಂಧನಕಾರರಾದ ವಿಜ್ಞಾನೇಶ್ವರಾದಿಗಳಿಂದ ಅದು ತಿರಸ್ಕರಿಸಲ್ಪಟ್ಟು ಇದೆ. ಷಡಶೀತಿಕಾರರ ಮತದಲ್ಲಿ ಪ್ರತ್ಯಕ್ಷದಲ್ಲಿ ತ್ರಿರಾತ್ರವೆಂದೂ ಪರೋಕ್ಷದಲ್ಲಿ ಪಕ್ಷಿಣೀಯೆಂದೂ ವೈದ್ಯನಾಥರ ಪಕ್ಷದಲ್ಲಿ ಪ್ರತ್ಯಕ್ಷವಾಗಲೀ ಪರೋಕ್ಷವಾಗಲೀ ಮೂರು ದಿನವೆಂದೂ ಹೇಳಿದೆ. ಇಲ್ಲಿ ಒಂದು ವಿಶೇಷವಿದೆ. ತ್ರಿರಾತ್ರ, ಪಕ್ಷಿಣೀ, ದಿನಾಶೌಚಗಳಿಗೆ ಸ್ವಸ್ವಕಾಲಾತಿಕ್ರಮವಾದರೆ ಸ್ನಾನಮಾತ್ರವೆಂದು ಷಡಶೀತಿಕಾರ ವೈದ್ಯನಾಥಾದಿಗಳ ಮತವು. ತ್ರಿರಾತ್ರ ಪಕ್ಷಿಣೀ, ದಿನಾಶೌಚಗಳಿಗೆ ಆಯಾಯ ಕಾಲಾತಿಕ್ರಮವಾದಾಗ್ಯೂ ಅಂತರ್ದಶಾಹದಲ್ಲಿ ಕ್ರಮವಾಗಿ ಒಂದು ದಿನ, ಒಂದು ಕಾಲ, ಒಂದು ಸ್ನಾನ ಇವುಗಳಿಂದ ಶುದ್ಧಿಯೆಂದು ಶತಕಕಾರರ ಮತವು ಅವರವರ ದೇಶಕುಲಾಚಾರದಂತೆ ನಡೆಯತಕ್ಕದ್ದು.

## ೧೮. ಸಪತ್ನೀಮಾತೃವಿಷಯೇ.

ದಶಾಹಾದೂರ್ಧ್ವಂ ಪುತ್ರವತ್ಯಾಸ್ಸಪತ್ನೀಮಾತುರ್ಮರಣೇ ಶ್ರುತೇ ಸಂವತ್ಸರಪರ್ಯಂತಂ ತ್ರಿರಾತ್ರಂ । ಸಂವತ್ಸರಾದೂರ್ಧ್ವಂ ಯಾವಜ್ಜೀವಂ ಸಪತ್ನೀಪುತ್ರಾಣಾಂ ಪಕ್ಷಿಣೀ । ಅಸ್ಯಾ ಅಕೃತಕ್ರಿಯಾತ್ವೇ ಅನಪತ್ಯತ್ವೇ ಸಂವತ್ಸರಾದರ್ವಾಕ್ ದಶರಾತ್ರಂ । ತದೂರ್ಧ್ವಂ ತ್ರಿರಾತ್ರಂ । ಇದಂ ದೇಶಾಂತರೇಪಿ ಭವತಿ ।

ಟೀ ॥ ಹತ್ತು ದಿನಕ್ಕೆ ಮೇಲೆ ಔರಸಪುತ್ರರಿರುವ ಸಪತ್ನೀತಾಯಿಯ ಮೃತಿಶ್ರವಣವಾದರೆ ಒಂದು ವರ್ಷದವರೆಗೂ ತ್ರಿರಾತ್ರಾಶೌಚವು. ಒಂದು ವರ್ಷಕ್ಕೆ ಮೇಲೆ ಯಾವಜ್ಜೀವವೂ ಪಕ್ಷಿಣೀ । ಸವತೀತಾಯಿಗೆ ಬೇರೆ ಗಂಡುಮಕ್ಕಳು ಇಲ್ಲದೇ ಪರಲೋಕಸಂಸ್ಕಾರವೂ ನಡಯದೇ ಇದ್ದಪಕ್ಷೆ ಒಂದು ವರ್ಷದೊಳಗೆ ದಶರಾತ್ರಾಶೌಚವು. ಕ್ರಿಯೆಯನ್ನು ಸಹ ಮಾಡಬೇಕು. ಒಂದು ವರ್ಷಕ್ಕೆ ಮೇಲೆ ತ್ರಿರಾತ್ರದಲ್ಲೇ ಕ್ರಿಯೆಯನ್ನೂ ಮಾಡಬೇಕು. ಈ ವಿಷಯವು ದೇಶಾಂತರವಾದಾಗ್ಯೂ ಉಂಟು.

## ೧೯. ಅಥ ತ್ರಿರಾತ್ರಾಶೌಚೇ.

ಮಾತಾಮಹ ಮಾತಾಮಹೀ ಮಾತೃಷ್ವಸೃ ಪಿತೃಷ್ವಸೃ ಮಾತುಳ ಮಾತುಳಾನೀ ದೌಹಿತ್ರ ಭಾಗಿನೇಯಾನಾಂ ಸನ್ನಿಧಾನಮರಣೇ ತ್ರಿರಾತ್ರಂ । ಮಾತುಳಸ್ಯ ಶ್ವಶುರತ್ವೇಪಿ ತ್ರಿರಾತ್ರಂ । ಅಸನ್ನಿಧಾನೇ ಪಕ್ಷಿಣೀ । ಶ್ವಶ್ರೂಶ್ವಶುರಯೋಃ ಸನ್ನಿಧಾನಮರಣೇ ಜೀವದ್ಭಾರ್ಯಸ್ಯ ದುಹಿತೃಭರ್ತುಸ್ತ್ರಿರಾತ್ರಂ । ಅಸನ್ನಿ

ಧಾನೇ ಪಕ್ಷಿಣೀ | ಮೃತಭಾರ್ಯಸ್ಯ ದುಹಿತೃಭರ್ತುಃ ಅಸನ್ನಿಧಾನೇಪ್ಯೇಕರಾತ್ರಂ| ಭಾರ್ಯಾಸಂತತೌ ಸ್ಥಿತಾಯಾಂ ತ್ರಿರಾತ್ರಂ | ಆಚಾರ್ಯ ಪುತ್ರ ಪತ್ನೀನಾಂ ಸನ್ನಿಧಾನಮರಣೇ ತ್ರಿರಾತ್ರಂ | ಸನ್ನಿಧಾನೇ ಶಿಷ್ಯಸ್ಯಮೃತೌ ಆಚಾರ್ಯಾದೀನಾಮಪ್ಯೇವಂ | ಋತ್ವಿಗ್ಯಜಮಾನಯೋಃ ಕ್ರಮಾಗತಯೋಃ ಸನ್ನಿಧಾನಮರಣೇ ಅನ್ಯೋನ್ಯಂ ತ್ರಿರಾತ್ರಂ | ಅಸನ್ನಿಧಾನೇ ಪಕ್ಷಿಣೀ ||

ಟೀ || ತಾಯಿಯತಾಯಿ, ತಾಯಿಯತಂದೆ, ತಾಯಿಯ ಅಕ್ಕತಂಗಿಯರು, ತಂದೆಯಅಕ್ಕತಂಗಿಯರು, ಸೋದರಮಾವ, ಅವನಹೆಂಡತೀ, ಮಗಳಮಗ, ಅಕ್ಕತಂಗಿಯರ ಮಗ, ಇವರುಗಳ ಪ್ರತ್ಯಕ್ಷಮರಣದಲ್ಲಿ ತ್ರಿರಾತ್ರಾಶೌಚವು. ಸೋದರಮಾವನೇ ಹೆಣ್ಣುಕೊಟ್ಟ ಮಾವನಾಗಿದ್ದರೂ ತ್ರಿರಾತ್ರವೇ. ಪರೋಕ್ಷದಲ್ಲಿ ಪಕ್ಷಿಣಿಯು. ಹೆಣ್ಣುಕೊಟ್ಟ ಅತ್ತೆ ಮಾವಂದಿರ ಸನ್ನಿಧಾನ ಮರಣದಲ್ಲಿ ಈ ಹೆಂಡತಿಯು ಬದುಕಿದ್ದ ಪಕ್ಷದಲ್ಲಿ ತ್ರಿರಾತ್ರವು. ಪರೋಕ್ಷದಲ್ಲಿ ಪಕ್ಷಿಣಿಯು. ಆ ಹೆಂಡತಿಯು ಮೃತಳಾಗಿದ್ದ ಪಕ್ಷದಲ್ಲಿ ಪರೋಕ್ಷದಲ್ಲಿ ಒಂದು ದಿನವು. ಆ ಹೆಂಡತಿಗೆ ಮಕ್ಕಳಿದ್ದಪಕ್ಷೆ ಅಳಿಯನಿಗೆ ತ್ರಿರಾತ್ರವು. ಆಚಾರ್ಯ ಆಚಾರ್ಯಪತ್ನೀ ಆಚಾರ್ಯಪುತ್ರರುಗಳ ಸನ್ನಿಧಾನ ಮರಣದಲ್ಲಿ ತ್ರಿರಾತ್ರವು. ಶಿಷ್ಯನ ಪ್ರತ್ಯಕ್ಷಮರಣದಲ್ಲಿ ಆಚಾರ್ಯಾದಿಗಳಿಗೂ ತ್ರಿರಾತ್ರವು. ಕುಲಕ್ರಮಾಗತವಾಗಿ ಬಂದ ಋತ್ವಿಕ್ ಯಜಮಾನರುಗಳ ಪ್ರತ್ಯಕ್ಷಮೃತಿಯಲ್ಲಿ ಪರಸ್ಪರವಾಗಿ ತ್ರಿರಾತ್ರವು. ಪರೋಕ್ಷದಲ್ಲಿ ಪಕ್ಷಿಣಿಯು.

## ೨೦. ಪುತ್ರೀಮರಣೇ—ಪಿತೃಗೃಹೇ.

ಪಿತೃಗೃಹೇ ಪುತ್ರೀಮರಣೇ ಮಾತಾಪಿತ್ರೋಸ್ತ್ರಿರಾತ್ರಂ | ತದ್ಭ್ರಾತೄಣಾಂ ಅವಿವಾಹಿತ ಭಗಿನೀನಾಂಚೈಕರಾತ್ರಂ |

ಟೀ || ತಂದೆಯ ಮನೆಯಲ್ಲಿ ಮಗಳು ಮೃತಳಾದರೆ ತಂದೆತಾಯಿಗಳಿಗೆ ತ್ರಿರಾತ್ರವು. ಅವಳ ಅಣ್ಣತಮ್ಮಂದಿರುಗಳಿಗೂ ವಿವಾಹವಿಲ್ಲದ ಅಕ್ಕತಂಗಿಯರುಗಳಿಗೂ ಒಂದು ದಿನವು.

## ೨೧ ಭ್ರಾತೃಗೃಹೇ ಭಗಿನೀಮರಣೇ

ಭ್ರಾತೃಗೃಹೇ ಭಗಿನೀಮರಣೇ ಭ್ರಾತುಸ್ತ್ರಿರಾತ್ರಂ | ಭ್ರಾತೃಪತ್ನೀನಾಂ ಸ್ನಾನಮಾತ್ರಂ |

ಶ್ಲೋ || ಭಗಿನೀಸೂತಕಂಚೈವ ಭ್ರಾತುಶ್ಚೈವಾಥಸೂತಕಂ |
ನೈವಸ್ಯಾದ್ಭ್ರಾತೃಪತ್ನ್ಯಾಸ್ತು ತಥಾಚ ಭಗಿನೀಪತೇಃ ||
ತಸ್ಯೈವ ಯಸ್ಯ ಯತ್ಪ್ರೋಕ್ತಂ ಆಶೌಚಂ ಚಾನ್ಯಗೋತ್ರಿಣಾಂ |
ಭವೇನ್ನೈವಾಥತತ್ಪತ್ನ್ಯಾ ಇತ್ಯೇವಂಮುನಯೋವಿದುಃ || ಇತಿ

ಶ್ಲೋ || ಯಾವದ್ಭರ್ತುರಘಂತಾವ ತ್ತತ್ಪತ್ನೀನಾಂ ತಥೈವಚ |

ಇತಿವಚನಂ ದ್ರಾವಿಡವಿಷಯಮಿತಿ ಷಡಶೀತಿಕಾರಪುಃಂ | ಗೃಹಶಬ್ದ ಏಕಗ್ರಾಮಪರಃ | ಗ್ರಾಮಾಂತರೇ ಪಕ್ಷಿಣೀ | ಸ್ವಗೃಹೇ ತ್ರಿರಾತ್ರಂ | ಪರಗೃಹೇ ಪಕ್ಷಿಣೀ | ಗ್ರಾಮಾಂತರೇ ಏಕರಾತ್ರಮಿತಿ ಕೇಚಿತ್ |

ಟೀ || ಅಣ್ಣತಮ್ಮಂದಿರ ಮನೆಯಲ್ಲಿ ಅಕ್ಕತಂಗಿಯರ ಮರಣವಾದರೆ ಭ್ರಾತೃವಿಗೆ ತ್ರಿರಾತ್ರವು. ಭ್ರಾತೃಪತ್ನಿಯಡುಗಳಿಗೆ ಸ್ನಾನಮಾತ್ರವು. ಯಾರಿಗೆ ಯಾವ ಆಶೌಚವು ಉಕ್ತವಾಗಿದೆಯೋ ಅದು ಅವರಿಗೆ ಹೊರತು ಅವರ ಪತ್ನಿಯ ರುಗಳಿಗಿಲ್ಲವೆಂದೂ, ಪತಿಗೆಬಂದ ಆಶೌಚವು ಪತ್ನಿಗೂ ಉಂಟೆಂಬುದು ದ್ರಾವಿಡ ವಿಷಯವೆಂದೂ ಷಡಶೀತಿಕಾರರ ಮತವು. ಗೃಹವೆಂದರೆ ಒಂದೇ ಗ್ರಾಮವೆಂ ದರ್ಥ. ಗ್ರಾಮಾಂತರವಾದರೆ ಪಕ್ಷಿಣ್ಯಾಶೌಚವು. ತನ್ನಮನೆಯಲ್ಲಾದರೆ ಮೂರುದಿನವು. ಅನ್ಯರ ಮನೆಯಲ್ಲಾದರೆ ಪಕ್ಷಿಣಿಯು. ಗ್ರಾಮಾಂತರವಾ ದರೆ ಒಂದುದಿನವೆಂದು ಕೆಲವರ ಮತವು.

## ೨೨. ಪುತ್ರೀವಿಷಯೇ.

ಸ್ವಗೃಹೇ ಪರಗೃಹೇವಾ ಪಿತ್ರೋರ್ಮ್ರರಣೇ ದುಹಿತುಸ್ತ್ರಿರಾತ್ರಂ | ಭಗಿನೀ ಗೃಹೇ ಭ್ರಾತೃಮರಣೇ ಭಗಿನ್ಯಾಸ್ತ್ರಿರಾತ್ರಂ | ಪರಗೃಹೇ ಪಕ್ಷಿಣೀ | ಗ್ರಾಮಾಂ ತರೇ ಏಕರಾತ್ರಂ | ಭಗಿನೀಪತೇಸ್ತು ಸ್ವಗೃಹೇ ಪರಗೃಹೇವಾ ಪತ್ನೀಭ್ರಾತೃ ಮರಣೇ ತತ್ಪುತ್ರ ಮರಣೇಚೈಕರಾತ್ರಂ | ಅನುಪನೀತ ಭ್ರಾತೃಮರಣೇ ಸನ್ನಿಧಾ ನೇಪಿ ಭಗಿನ್ಯಾಸ್ನಾನಮಾತ್ರಂ | ಭ್ರಾತೃಪುತ್ರ ಮರಣೇಚ ಸ್ನಾನಮಾತ್ರಂ |

ಟೀ || ತನ್ನ ಮನೆಯಲ್ಲಾಗಲೀ ಅನ್ಯರ ಗೃಹದಲ್ಲಾಗಲೀ ತಂದೆಯ ಮರಣ ದಲ್ಲಿ ಮಗಳಿಗೆ ತ್ರಿರಾತ್ರಾಶೌಚವು. ಅಕ್ಕತಂಗಿಯರ ಮನೆಯಲ್ಲಿ ಅಣ್ಣತಮ್ಮಂದಿರ ಮರಣದಲ್ಲಿ ಅಕ್ಕತಂಗಿಯರಿಗೆ ತ್ರಿರಾತ್ರಾಶೌಚವು. ಅನ್ಯರ ಮನೆಯಲ್ಲಾದರೆ ಪಕ್ಷಿಣಿಯು. ಅನ್ಯ ಗ್ರಾಮವಾದರೆ ಒಂದುದಿನವು. ಅಕ್ಕತಂಗಿಯರ ಗಂಡಂದಿ

ರಿಗೆ; ತನ್ನ ಮನೆಯಲ್ಲಾಗಲೀ ಪರರ ಮನೆಯಲ್ಲಾಗಲೀ ಹೆಂಡತಿಯ ಭ್ರಾತೃವಿನ ಮರಣದಲ್ಲಿಯೂ, ಅವನ ಪುತ್ರನ ಮರಣದಲ್ಲಿಯೂ ಒಂದು ದಿನವು. ಉಪ ನಯನವಿಲ್ಲದ ಭ್ರಾತೃವಿನ ಮೃತಿಯಲ್ಲಿ ಪ್ರತ್ಯಕ್ಷದಲ್ಲಿಯೂ ಅಕ್ಕತಂಗಿಯರಿಗೆ ಸ್ನಾನಮಾತ್ರವು. ಭ್ರಾತೃಪುತ್ರರ ಮರಣದಲ್ಲಿಯೂ ಸ್ನಾನಮಾತ್ರವು.

### ೨೩. ಸಪತ್ನೀಪುತ್ರಮರಣೇ.

ಅನುಪನೀತ ಸಪತ್ನೀಪುತ್ರಮರಣೇ ಸಪತ್ನೀಮಾತುರೇಕದಿನಂ | ಭರ್ತುಃ ಪ್ರಾಪ್ತಂ ತ್ರಿರಾತ್ರಾದಿಕಮಪೀತ್ಯನ್ಯೇ | ಮಾತುಸ್ಸಪತ್ನೀಮರಣೇ ಸಪತ್ನೀಪುತ್ರ್ಯಾ ಏಕರಾತ್ರಂ | ಸಪತ್ನ್ಯಾಃ ಮಾತಾಪಿತೃ ಭ್ರಾತ್ರಾದಿ ಬಂಧುಮರಣೇ ಸಪತ್ನ್ಯಾ ಸ್ಸನ್ನಿಧಾನೇಪಿ ಸ್ನಾನಮಾತ್ರಂ |

ಟೀ || ಅನುಪನೀತನಾದ ಸಪತ್ನೀಪುತ್ರನ ಮರಣದಲ್ಲಿ ಸಪತ್ನೀತಾಯಿಗೆ ಒಂದುದಿನ. ಗಂಡನಿಗೆ ಬಂದ ಮೂರುದಿನಾಶೌಚವು ಸವತೀತಾಯಿಗೆ ಉಂಟೆಂದು ಕೆಲವರು. ತಾಯಿಯ ಸವತೀಮರಣದಲ್ಲಿ ಸಪತ್ನೀ ಮಗಳಿಗೆ ಒಂದುದಿನವು. ಸವತಿಯ ತಾಯಿತಂದೆ ಅಣ್ಣ ತಮ್ಮಂದಿರೇ ಮೊದಲಾದ ಬಂಧುಗಳ ಮರಣದಲ್ಲಿ ಸವತಿಗೆ ಪ್ರತ್ಯಕ್ಷದಲ್ಲಿಯೂ ಸ್ನಾನಮಾತ್ರವು.

### ೨೪. ದೌಹಿತ್ರಭಾಗಿನೇಯ ಮೃತೌ.

ದೌಹಿತ್ರಭಾಗಿನೇಯಯೋಃ ಪ್ರಾಗುಪನಯನಾನ್ಮರಣೇ ಮಾತಾಮಹ ಮಾತುಳಯೋಃ ಪಕ್ಷಿಣೀ | ಉಪನಯನಾದೂರ್ಧ್ವಂ ತ್ರಿರಾತ್ರಂ |

ಟೀ || ಮಗಳ ಮಗ, ಅಕ್ಕತಂಗಿಯರ ಮಗ, ಇವರು ಉಪನಯನಕ್ಕೆ ಮುಂಚೆ ಮೃತರಾದರೆ ತಾಯಿಯ ತಂದೆಗೂ ಸೋದರಮಾವನಿಗೂ ಪಕ್ಷಿಣ್ಯಾಶೌಚವು. ಉಪನಯನಾನಂತರದಲ್ಲಿ ತ್ರಿರಾತ್ರವು.

### ೨೫. ಪಕ್ಷಿಣ್ಯಾಶೌಚಂ.

ಅತ್ರ ಜ್ಯೇಷ್ಠಮಾತೃ ಪುತ್ರೀಪುತ್ರಯೋಃ ಪ್ರತಿಯೋಗಿನೌ ಸ್ತ್ರೀಪುಮಾಂಸೌ ಕನಿಷ್ಠಮಾತೃ ಪುತ್ರೀಪುತ್ರೌ | ಕನಿಷ್ಠಮಾತೃ ಪುತ್ರೀಪುತ್ರಯೋಃ ಪ್ರತಿಯೋಗಿನೌ ಸ್ತ್ರೀಪುಮಾಂಸೌ ಜ್ಯೇಷ್ಠಮಾತೃ ಪುತ್ರೀಪುತ್ರೌ | ಪಿತೃಷ್ವಸೃ ಪುತ್ರೀಪುತ್ರಯೋಃ ಪ್ರತಿಯೋಗಿನೌ ಮಾತುಳ ಪುತ್ರೀಪುತ್ರೌ | ಸ್ವಸುಃ ಪ್ರತಿಯೋಗಿನೌ ಭ್ರಾತೃಭಗಿನ್ಯೌ | ಜ್ಯೇಷ್ಠಭಗಿನ್ಯಾಃ ಪ್ರತಿಯೋಗಿನೌ ಕನಿಷ್ಠಭಗಿ

ನೀಭ್ರಾತರೌ | ಕನಿಷ್ಠಭಗಿನ್ಯಾಃ ಪ್ರತಿಯೋಗಿನೌ ಜ್ಯೇಷ್ಠಭಗಿನೀ ಭ್ರಾತರೌ | ಪಿತೃವ್ಯಪುತ್ರ್ಯಾಃ ಪ್ರತಿಯೋಗಿನೌ ಪಿತೃವ್ಯಪುತ್ರೀಪುತ್ರೌ | ಸ್ವಸೃಪುತ್ರ್ಯಾಃ ಪ್ರತಿಯೋಗಿನೌ ಮಾತೃಷ್ವಸೃ ಮಾತುಳೌ | ಪಿತೃಷ್ವಸುಃ ಪ್ರತಿಯೋಗಿನೌ ಭ್ರಾತೃಪುತ್ರೀಪುತ್ರೌ | ಭ್ರಾತೃಪುತ್ರ್ಯಾಃ ಪ್ರತಿಯೋಗಿನೌ ಪಿತೃಷ್ವಸೃಪಿತೃವ್ಯೌ | ದೌಹಿತ್ರ್ಯಾಃ ಪ್ರತಿಯೋಗಿನೌ ಮಾತಾಮಹೀ ಮಾತಾಮಹೌ | ಪೌತ್ರ್ಯಾಃ ಪ್ರತಿಯೋಗಿನೌ ಪಿತಾಮಹೀ ಪಿತಾಮಹೌ | ಏತೇಷಾಂ ಪರಸ್ಪರಂ ಸನ್ನಿಧಾನೇ ಪಕ್ಷಿಣ್ಯಾಶೌಚಂ | ಗ್ರಾಮಾಂತರೇ ಸ್ನಾನಮಾತ್ರಂ | ಏತೇಷಾಮತಿಕ್ರಾಂತಾಶೌಚಂ ನಾಸ್ತ್ಯೇವ |

ಟೀ || ಅನುಯೋಗೀ ಎಂದರೆ ಅಣ್ಣ, ಅಕ್ಕ. ತತ್ಪ್ರತಿಯೋಗಿಗಳು ಎಂದರೆ ತಮ್ಮ, ತಂಗಿಯರು. ಒಂದುಸಮಯ ಅನುಯೋಗಿ ಎಂದರೆ ತಮ್ಮ ತಂಗಿಯರು. ಪ್ರತಿಯೋಗಿ ಎಂದರೆ ಅಣ್ಣ, ಅಕ್ಕ. ತಾಯಿಯ ಕೂಡ ಹುಟ್ಟಿದ ಹೆಂಗಸು ಅನುಯೋಗಿಯಾದರೆ ಅವಳ ಅಕ್ಕತಂಗಿಯರ ಮಕ್ಕಳು ಪ್ರತಿಯೋಗಿಗಳು ಇದೇ ರೀತಿ ಎಲ್ಲಾ ವಾವೆಗಳಲ್ಲೂ ಇವನು ಅನುಯೋಗಿ ಯಾರಿಗೆ ಆಗುತ್ತಾನೋ ಅವರು ಇವನಿಗೆ ಪ್ರತಿಯೋಗಿಗಳೆಂದು ತಿಳಿಯಬೇಕು. ಮೇಲೆ ಹೇಳಿದ ಬಂಧುಗಳ ಮರಣದಲ್ಲಿ ಪರಸ್ಪರವಾಗಿ ಪ್ರತ್ಯಕ್ಷ ಮರಣವಾಗಿದ್ದರೆ ಪಕ್ಷಿಣ್ಯಾಶೌಚವೆಂದೂ ಗ್ರಾಮಾಂತರದಲ್ಲಿ ಮರಣವಾದರೆ ಸ್ನಾನವೆಂದೂ ಷಡಶೀತ್ಯಾದಿ ಮತವು. ದ್ರಾವಿಡಪಕ್ಷದಲ್ಲಿ ಇವರಲ್ಲಿ ಕೆಲವರಿಗೆ ಪ್ರತ್ಯಕ್ಷದಲ್ಲಿ ತ್ರಿರಾತ್ರವು. ಪರೋಕ್ಷದಲ್ಲಿ ಪಕ್ಷಿಣಿಯು. ಕೆಲವರಿಗೆ ಸದಾ ಪಕ್ಷಿಣೀ ಎಂದು ಇದೆ. ಆಂಧ್ರಪಕ್ಷದಲ್ಲಿ ಷಡಶೀತಿಕಾರರ ಅಭಿಪ್ರಾಯದಂತೆ ಅನುಷ್ಠಾನವನ್ನು ಆಂಧ್ರರು ಮಾಡುತ್ತಿದ್ದಾರೆ. ಈ ವಾವೆಗಳ ವಿಮರ್ಶೆಯು ದ್ರಾವಿಡಪಕ್ಷದಲ್ಲಿ ವಿಶದವಾಗಿ ಬರೆಯಲ್ಪಟ್ಟಿದೆ. ಅಲ್ಲಿನೋಡಿ ತಿಳಿದುಕೊಳ್ಳಬೇಕು. ಪುನರುಕ್ತಿಯಾಗುವುದರಿಂದ ಇಲ್ಲಿ ಬರೆಯಲ್ಪಡಲಿಲ್ಲ.

### ೨೬. ತ್ರಿರಾತ್ರಾದ್ಯಾಶೌಚೇ ಅತಿಕ್ರಾಂತವಿಷಯಃ.

ತ್ರಿರಾತ್ರಾಶೌಚಿನಾಂ ತನ್ಮಧ್ಯೇ ಶ್ರವಣೇ ಶೇಷೇಣ ಶುದ್ಧಃ | ತ್ರಿರಾತ್ರಾತಿಕ್ರಮೇ ನಾಸ್ತ್ಯಾಶೌಚಂ | ಕಿಂತು ಸಚೇಲಸ್ನಾನಂ | ಪಕ್ಷಿಣ್ಯಾಶೌಚಿನಾಂ ಪಕ್ಷಿಣೀಕಾಲಮಧ್ಯೇ ಮರಣಶ್ರವಣೇ ಶೇಷೇಣಶುದ್ಧಿಃ | ಪಕ್ಷಿಣೀಕಾಲೇ ಅತೀತೇ ಸ್ನಾನಮಾತ್ರಂ | ಏಕದಿನಾಶೌಚಿನಾಂ ಏಕದಿನಾತಿಕ್ರಮೇಽಪಿ ಸ್ನಾನಮಾತ್ರಂ|

ಟೀ || ತ್ರಿರಾತ್ರ, ಪಕ್ಷಿಣೀ ದಿನಾಶೌಚಗಳಿಗೆ ಆಯಾಯ ಕಾಲಗಳ ಒಳಗೆ ಶ್ರವಣವಾದರೆ ಆಯಾಯ ಕಾಲಶೇಷದವರೆಗೆ ಆಶೌಚವು. ಅನಂತರ ಶುದ್ಧಿಯು. ತ್ರಿರಾತ್ರ, ಪಕ್ಷಿಣೀ, ಏಕದಿನಾಶೌಚಗಳು ಆಯಾಯ ಕಾಲ ಕಳೆದಮೇಲೆ ಶ್ರುತವಾದರೆ ಸ್ನಾನಮಾತ್ರದಿಂದ ನಿವೃತ್ತಿಯಾಗುತ್ತವೆ. ಇದು ಆಶೌಚ ಶತಕದಲ್ಲಿ ದ್ರಾವಿಡರಿಗೆ ಭೇದವಿದೆ. ಅವರು ದ್ರಾವಿಡಪಕ್ಷದಲ್ಲಿ ನೋಡಿ ತಿಳಿಯಬೇಕು.

## ೨೭. ದುರ್ಮೃತಿಲಕ್ಷಣಂ.

ಶೃಂಗಿ, ದಂಷ್ಟ್ರೀ, ನಖೀ, ವ್ಯಾಳ, ವಿಷ, ವಹ್ನಿ, ಜಲ, ಚೌರ್ಯ, ಪರದಾರಗಮನಾದಿ ನಿಮಿತ್ತ ಚಂಡಾಲಾದಿಭಿಃ, ಉದ್ಬಂಧನಾದ್ಯೈಃ ಪತನಾದಿಭಿರ್ವಾ ಬುದ್ಧಿಪೂರ್ವಂ ಮೃತೌ ಪುತ್ರಜ್ಞಾತ್ಯಾದೀನಾಂ ನಾಶೌಚಂ | ಸಂವತ್ಸರಾಂತೇ ನಾರಾಯಣಬಲಿಪೂರ್ವಕಂ ಉಕ್ತಪ್ರಾಯಶ್ಚಿತ್ತಂ ಕೃತ್ವಾ ಪುತ್ರಾದಿಭಿ ಸ್ಸಂಸ್ಕಾರಃ ಕರ್ತವ್ಯಃ | ತದಾ ಸರ್ವೈರ್ಯಥೋಕ್ತಂ ಆಶೌಚಮನುಷ್ಠೇಯಂ | ವಿದ್ಯುಚ್ಛೋರಾದಿಭಿಸ್ಸಂಪ್ರಾಪ್ತ ಪ್ರಮಾದ ದುರ್ಮರಣೇ ಪಂಚಗುಣ ಪ್ರಾಯಶ್ಚಿತ್ತಪೂರ್ವಕಂ ಸದ್ಯಏವ ಸಂಸ್ಕಾರಕರಣಪಕ್ಷೇ ಪುತ್ರಾದೀನಾಮಾಶೌಚಂ ತದೈವ | ನಾರಾಯಣಬಲಿಶ್ಚೇತಿ ಹೇಡಶೀತಲ |

ಟೀ || ಕೊಂಬುಳ್ಳ ಗೋವು, ಎಮ್ಮೆ ಮೊದಲಾದುವುಗಳಿಂದಲೂ, ಕೋರೆಹಲ್ಲುಳ್ಳ ಹಂದಿ, ಹುಲಿ, ಮೊದಲಾದುವುಗಳಿಂದಲೂ, ತೀಕ್ಷ್ಣವಾದ ಉಗುರುಗಳುಳ್ಳ ಕರಡಿ ಮೊದಲಾದುವುಗಳಿಂದಲೂ, ಸರ್ಪಾದಿ ವಿಷಪ್ರಾಣಿಗಳಿಂದಲೂ, ನೀರು, ಬೆಂಕಿಗಳಿಂದಲೂ, ಪರದಾರಗಮನದಲ್ಲಿ ತದ್ಬಂಧುಗಳಿಂದಲೂ, ಕಳ್ಳರುಗಳಿಂದಲೂ, ಯುದ್ಧವಲ್ಲದೆ ಕಾಳಗ ಕಲಹಾದಿಗಳಿಂದಲೂ, ಬುದ್ಧಿಪೂರ್ವಕ ದುರ್ಮಣದಲ್ಲಿಯೂ, ಪುತ್ರಜ್ಞಾತ್ಯಾದಿಗಳಿಗೆ ಆಶೌಚವು ತತ್ಕಾಲದಲ್ಲಿಲ್ಲವು. ತ್ರಿಪಕ್ಷ ವತ್ಸರಾಂತಾದಿ ಶಾಸ್ತ್ರೋಕ್ತ ಕಾಲಗಳಲ್ಲಿ ನಾರಾಯಣಬಲಿ, ಉಕ್ತಪ್ರಾಯಶ್ಚಿತ್ತ ಇವನ್ನು ಮಾಡಿ ಸಂಸ್ಕಾರ ಮಾಡಬೇಕು. ಕ್ರಿಯಾರಂಭ ಕಾಲದಲ್ಲಿ ಸರ್ವರಿಗೂ ಆಶೌಚವೆಂದೂ, ಸಿಡಿಲು, ಮರದಿಂದ ಬೀಳುವಿಕೆ, ಮೇಲೆಹೇಳಿದ ಪ್ರಾಣಿಗಳು ಇವುಗಳಿಂದ ಅಕಸ್ಮಾತ್ತಾಗಿ ಮರಣ ಸಂಭವಿಸಿದರೆ ತತ್ಕಾಲದಲ್ಲೇ ಮೇಲೆಹೇಳಿದ ವಿಧ್ಯುಕ್ತ ಪ್ರಾಯಶ್ಚಿತ್ತವನ್ನು ಮಾಡಿ ಸಂಸ್ಕಾರ ನಡೆಸುವ ಪಕ್ಷದಲ್ಲಿ ಪುತ್ರಾದಿ ಸರ್ವರಿಗೂ ಆಗಲೇ ಆಶೌಚಾನುಷ್ಠಾನವೆಂದೂ ಶಾಸ್ತ್ರದಲ್ಲಿ ಹೇಳಲ್ಪಟ್ಟಿದೆ.

ಆದಾಗ್ಯೂ ಬುದ್ಧಿಪೂರ್ವಕ ಮರಣ ಅಕಸ್ಮಾನ್ಮರಣ ಈ ಎರಡರಲ್ಲೂ ತತ್ಕಾಲದಲ್ಲಿ ಸಂಸ್ಕಾರ ನಡೆಸಿದರೂ, ಕಾಲಾಂತರದಲ್ಲಿ ಸಂಸ್ಕಾರ ನಡೆಸಿದರೂ ಸರ್ವಜ್ಞಾತ್ಯಾದಿಗಳೂ ಮರಣಾದ್ಯಾಶೌಚಾನುಷ್ಠಾನವನ್ನೂ, ಉದಕದಾನವನ್ನೂ ನಡೆಸಿಬಿಟ್ಟು ಕ್ರಿಯಾರಂಭದಲ್ಲಿ ಯಾವ ಆಶೌಚಾನುಷ್ಠಾದಿಗಳೂ ಇಲ್ಲದೇ ಇರುವ ಆಚಾರವೇ ಈ ದೇಶಗಳಲ್ಲಿ ಅವಿಗೀತಶಿಷ್ಟಾಚಾರವಾಗಿ ಬಹುಶಃ ಶಿಷ್ಟರುಗಳಲ್ಲೂ ಕಂಡುಬರುತ್ತದೆ. ದೇಶಶಿಷ್ಟಾಚಾರದಂತೆ ನಡೆಯತಕ್ಕದ್ದು.

### ೨೮. ದಂಪತ್ಯೋಸ್ಸಪತ್ನೀನಾಂಚ.

ದಂಪತ್ಯೋಸ್ಸಪತ್ನೀನಾಂಚ ವತ್ಸರಮಧ್ಯೇ ಮೃತಿಶ್ರವಣೇ ಅಕೃತಕ್ರಿಯ ವಿಷಯೇ ಮಾತಾಪಿತೃವದ್ದಶಾಹಂ । ಕೃತಕ್ರಿಯ ವಿಷಯೇ ತ್ರಿರಾತ್ರಂ । ವತ್ಸರಾದೂರ್ಧ್ವಂ ಅಕೃತಕ್ರಿಯ ವಿಷಯೇ ತ್ರಿರಾತ್ರಂ । ಕೃತಕ್ರಿಯೇತ್ವೇಕರಾತ್ರಂ ।

ಟೀ || ಗಂಡಹೆಂಡತಿಯರಿಗೂ, ಸವತಿಯರುಗಳಿಗೂ, ಒಂದು ವರ್ಷದೊಳಗೆ ಮೃತಿಶ್ರವಣವಾಗಿ ಕ್ರಿಯೆ ನಡೆಯದೇ ಇದ್ದಪಕ್ಷದಲ್ಲಿ ಮಾತಾಪಿತೃಗಳಂತೆ ಪರಸ್ಪರ ದಶರಾತ್ರಾಶೌಚವು. ಕ್ರಿಯೆ ನಡೆದಿದ್ದಪಕ್ಷದಲ್ಲಿ ಮೂರುದಿನಾಶೌಚವು. ಒಂದುವರ್ಷ ಕಳೆದಿದ್ದರೆ ಕ್ರಿಯೆ ನಡೆಯದೇ ಇದ್ದರೆ ತ್ರಿರಾತ್ರವು. ಕ್ರಿಯೆ ನಡೆದಿದ್ದು ಒಂದುವರ್ಷವೂ ಕಳೆದಿದ್ದರೆ ಒಂದು ದಿನವು.

### ೨೯. ದಿನಾಶೌಚವಿಷಯಃ.

ಗುರೂಪಾಧ್ಯಾಯ, ಮಹಾಮಂಡಲಾಧಿಪ, ಏಕಗ್ರಾಮವಾಸಿಶ್ರೋತ್ರಿಯ, ಸಾಂಗಾಧ್ಯಾಯಿ ಶಿಷ್ಯ, ಗುರೂಪಾಧ್ಯಾಯ ಪತ್ನೀನಾಂಚ ಮರಣೇ ದಿನಮಾಶೌಚಂ ।

ಟೀ|| ವೇದೋಪದೇಶ ಮಾಡಿದ ಗುರು, ಇತರ ವಿದ್ಯೋಪದೇಶ ಮಾಡಿದ ಉಪಾಧ್ಯಾಯ; ಇವರುಗಳ ಪತ್ನಿಯರು, ಮಹಾಮಂಡಲಾಧಿಪತಿಯಾದ ಚಕ್ರವರ್ತಿ, ಒಂದು ಗ್ರಾಮದಲ್ಲಿ ವಾಸಮಾಡುವ ಶ್ರೋತ್ರಿಯ, ಸಾಂಗವೇದಾಧ್ಯಯನ ಮಾಡಿದ ಶಿಷ್ಯ, ಇವರುಗಳ ಮೃತಿಯಲ್ಲಿ ಒಂದುದಿನಾಶೌಚವು.

ಮೂಲ || ಪರೋಕ್ಷೇ ಭಿನ್ನಮಾತುಲಸ್ಯ, ಸಹಾಧ್ಯಾಯಿನಃ, ಮೃತಪಿತೃ ತತ್ಸಂತತಿಕೋಯಶ್ಚತುರಸ್ತಸ್ಯ, ಭಿನ್ನಮಾತೃಷ್ವಸುಃ, ಭಿನ್ನಪಿತೃಷ್ವಸುಃ, ತಾಸಾಂ ಪುತ್ರಪುತ್ರೀಣಾಂಚ ಮೃತೌ ಏಕದಿನಂ । (ಸಪತ್ನೀ ಮಾತೃಭ್ರಾತಾ

ಭಿನ್ನಮಾತುಳಃ । ದತ್ತಸ್ಯ ಪ್ರತಿಗೃಹೀತೃ ಮಾತೃಭ್ರಾತಾಚ ಭಿನ್ನಮಾತುಳಃ । ) ಏತಯೋರ್ಭಿನ್ನಮಾತುಳಯೋಃ. (ಸಪತ್ನೀ ಮಾತೃಷ್ವಸಾ, ಭಿನ್ನಮಾತೃಷ್ವಸೇತ್ಯುಚ್ಯತೇ । ಮಾತುರ್ಭಿನ್ನೋದರಭಗಿನೀಚ ಭಿನ್ನಮಾತೃಷ್ವಸೇತಿ ಕೇಷಾಂ ಚಿನ್ಮತಂ । ) ಏತಯೋರ್ಭಿನ್ನಮಾತೃಷ್ವಸ್ರೋಃ, (ಪಿತೃಭಿನ್ನೋದರಭಗಿನೀ ಭಿನ್ನಪಿತೃಷ್ವಸಾ । ದತ್ತಸ್ಯ ಪ್ರತಿಗೃಹೀತೃ ಪಿತೃಭಗಿನೀಚ ಭಿನ್ನಪಿತೃಷ್ವಸೇತ್ಯುಚ್ಯತೇ । ) ಏತಯೋರ್ಭಿನ್ನಪಿತೃಷ್ವಸ್ರೋಃ, ಭಿನ್ನಮಾತೃಷ್ವಸ್ಯ, ಭಿನ್ನಪಿತೃಷ್ವಸ್ಯ, ಭಿನ್ನಮಾತುಳಾನಾಂ, ಪುತ್ರಿಪುತಯೋಶ್ಚ ಏತೇಷಾಂ ಪೂರ್ವೋಕ್ತಾನಾಂ ಮರಣೇ ತತ್ಪ್ರತಿಯೋಗಿನಾಂ ಏಕದಿನಮಾಶೌಚಂ ।

ಶ್ಲೋ ॥ ಯಾಸಪತ್ನೀಸುತಾ ಮಾತೃ ಸಪತ್ನೀಯಾಚತೇಮಿಥಃ ।
ಅಹೋರಾತ್ರೇಣಶುಧ್ಯೇತಾ ಮಾಹಪಾರಸ್ಕರೋಮುನಿಃ ॥

ಇತಿ ವಚನೇನ ಪರಿಣೀತಾಯಾಃ ಸಪತ್ನೀಸುತಾಯಾಃ ಸಾಪತ್ನ್ಯಮಾತುಶ್ಚ ಮರಣೇ ಪರಸ್ಪರಮೇಕರಾತ್ರಮಾಶೌಚಂ । ಪ್ರಾಗುಕ್ತವಚನಘಟಿತಾನಾಂ ಕೇಷಾಂ ಚಿತ್ಪದಾನಾಂ ವಿವರಣಂ ॥ ಗುರುಃ :—

ಶ್ಲೋ ॥ ನಿಷೇಕಾದೀನಿಕರ್ಮಾಣಿ ಯಃಕರೋತಿಯಥಾವಿಧಿ ।
ಸಂಭಾವಯತಿಚಾನ್ನೇನ ಸವಿಪ್ರೋಗುರುರುಚ್ಯತೇ ॥
ಅಲ್ಪಂವಾಬಹುವಾಯಸ್ಯ ಶ್ರುತಸ್ಯೋಪಕರೋತಿಯಃ ।
ತಮಪೀಹಗುರುಂವಿಂದ್ಯಾ ಚ್ಛ್ರುತೋಪಕ್ರಿಯಯಾತಯಾ ॥

ಇತಿ ಮನುವಚನಂ ॥ ಉಪಾಧ್ಯಾಯಃ :—

ಶ್ಲೋ ॥ ಏಕದೇಶಂತು ವೇದಸ್ಯ ವೇದಾಂಗಾನ್ಯಥವಾಪುನಃ ।
ಯೋಧ್ಯಾಪಯತಿವೃತ್ತ್ಯರ್ಥ ಮುಪಾಧ್ಯಾಯಸ್ಸಉಚ್ಯತೇ ॥

ದ್ವಾದಶಾಬ್ದನ್ಯೂನಕಾಲಂ ಸಹಾಧೀತವಿದ್ಯಸ್ಸಹಾಧ್ಯಾಯೀ । ಸಹಾಧೀತ ವೇದೈಕದೇಶೋವಾ ಸಹಾಧ್ಯಾಯೀ । ಆಚಾರ್ಯಃ— ಜಪ್ಯಮಂತ್ರೋಪದೇಷ್ಟಾ ಆಚಾರ್ಯ ಇತಿ ವೈದ್ಯನಾಥಮತಂ । ಅತ್ರ ಪಕ್ಷಿಣೀದಿನಾಶೌಚಯೋಃ ಪೂರ್ವಂ ತತ್ರ ಪ್ರಸಕ್ತ್ಯಾ ಉಕ್ತತ್ವೇಪಿ ಪುನಸ್ಸಮುಚ್ಚಿತ್ಯ ಗ್ರಹಣಂ ಸೌಕರ್ಯಾರ್ಥಮಿತಿ ಮಂತವ್ಯಂ ।

ಟೀ ॥ ಪರೋಕ್ಷದಲ್ಲಿ ಭಿನ್ನಮಾತುಳ, ಭಿನ್ನಮಾತೃಷ್ವಸೃ, ಭಿನ್ನಪಿತೃಷ್ವಸೃ, ಇವರುಗಳ ಪುತ್ರೀಪುತ್ರರು, ಸಹಾಧ್ಯಾಯೀ, ಇವರುಗಳ ಮರಣದಲ್ಲಿ

ಪ್ರತಿಯೋಗಿಗಳಿಗೂ, ಮಾವನ ಮರಣದಲ್ಲಿ ಹೆಂಡತಿ ಮಕ್ಕಳುಗಳಿಲ್ಲದ ಅಳಿಯನಿಗೂ ಒಂದುದಿನ ಆಶೌಚವು.

[ವಿವರಣೆ:—ಭಿನ್ನಮಾತುಳ= (1) ಸವತೀತಾಯಿ ( ಎಂದರೆ ಬಲತಾಯಿ) ಯ ತಮ್ಮ, (2) ದತ್ತು ತೆಗೆದುಕೊಂಡ ತಾಯಿಯ ತಮ್ಮ.

ಭಿನ್ನಮಾತೃಷ್ವಸೃ= (1) ಸವತೀತಾಯಿಯ ಅಕ್ಕತಂಗಿಯರು (2) ತಾಯಿಗೆ ಬಲತಾಯಿಯ ಮಗಳು, (3) ದತ್ತು ತೆಗೆದುಕೊಂಡ ತಾಯಿಯ ಅಕ್ಕತಂಗಿಯರು.

ಭಿನ್ನಪಿತೃಷ್ವಸೃ=(1) ತಂದೆಗೆ ಸವತೀತಾಯಿಯ ಮಗಳು, (2) ದತ್ತು ತೆಗೆದುಕೊಂಡ ತಂದೆಯ ಅಕ್ಕತಂಗಿಯರು.]

ವಿವಾಹಿತಳಾದ ಸಪತ್ನೀಪುತ್ರಿಗೂ ಸವತೀತಾಯಿಗೂ ಪರಸ್ಪರ ಏಕದಿನಾಶೌಚವು. ಅನಾಥ ಶಿಶುವಿಗೆ ನಿಷೇಕ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಿ ಅನ್ನಾದಿಗಳಿಂದ ರಕ್ಷಿಸಿದವನು ಗುರುವು. ವೇದಾಭ್ಯಾಸಕ್ಕೆ ಬಹುವಾಗಿಯಾಗಲೀ, ಅಲ್ಪವಾಗಿಯಾಗಲೀ ಸಹಾಯ ಮಾಡಿದವನೂ ಕೂಡ ಗುರುವೆಂದು ಮನುವಚನವು. ವೇದದ ಕೆಲವು ಭಾಗವನ್ನಾಗಲೀ, ವೇದಾಂಗಶಾಸ್ತ್ರಗಳನ್ನಾಗಲೀ, ಉಪದೇಶಿಸಿದವನು ಉಪಾಧ್ಯಾಯನು. ಹನ್ನೆರಡು ವರ್ಷಕ್ಕೆ ಕಡಿಮೆಯಾಗಿ ಕೂಡ ಅಧ್ಯಯನ ಮಾಡಿದವನೂ, ಕೆಲವುಭಾಗ ಅಧ್ಯಯನವನ್ನು ಕೂಡ ಮಾಡಿದವನೂ ಸಹ ಸಹಾಧ್ಯಾಯೀ ಎನ್ನಿಸಿಕೊಳ್ಳುವನು. ಪುನಶ್ಚರಣೋಪಯುಕ್ತ ಮಂತ್ರೋಪದೇಶ ಮಾಡಿದವನು ಆಚಾರ್ಯನೆಂದು ವೈದ್ಯನಾಥರು ಹೇಳಿರುವರು| ಇವರುಗಳ ಮೃತಿಯಲ್ಲಿ ಪರಸ್ಪರ ದಿನಾಶೌಚವು

## ೩೦ ದತ್ತಸ್ಯ ಪುತ್ರಜನನೇ.

ದತ್ತಸ್ಯ ಪುತ್ರಜನನೇ ಮರಣೇ ಪೂರ್ವಗೋತ್ರಿಣಾಂ ಸ್ನಾನಮಾತ್ರಂ "........ಸಚೇಲಂಸ್ನಾನ್ನಾಶೌಚಂ ವಿದ್ಯತೇಕ್ವಚಿತ್" ಇತ್ಯುಕ್ತ್ಯಾ ಅನ್ಯಗೋತ್ರ ದತ್ತಸ್ಯ ಪುತ್ರಜನನೇ ಪುತ್ರಮರಣೇವಾ ಪೂರ್ವಗೋತ್ರಿಣಾಂ ಸಚೇಲಸ್ನಾನಮಾತ್ರಂ | ನತ್ವಾಶೌಚಂ |

ಟೀ || ಅನ್ಯಗೋತ್ರಕ್ಕೆ ದತ್ತುವಾದವನಿಗೆ ಪುತ್ರಜನನವಾಗಲೀ, ಪುತ್ರಮರಣವಾಗಲೀ ಉಂಟಾದರೆ ಪೂರ್ವಗೋತ್ರಿಗಳಿಗೆ ಸಚೇಲಸ್ನಾನಮಾತ್ರವೇ ಹೊರತು ಆಶೌಚವಿಲ್ಲ.

## ೩೧. ಅಥ ಸಜ್ಯೋತಿರಾಶೌಚಂ.

ಸ್ವದೇಶಾಧಿಪ, ಸ್ವಗ್ರಾಮಾಧಿಪ, ಸ್ವಕುಲಪತೀನಾಂ, ಪರೋಕ್ಷೇ ಶ್ರೋತ್ರಿಯ ಶಿಷ್ಯಯೋಃ, ಮಿತ್ರಸ್ಯ, ಆತ್ಮಸೋಮಾತೃತಃ ಪಿತೃತಶ್ಚ ದೂರಬಂಧೂನಾಂ, ಪರೋಕ್ಷೇ ಸ್ಯಾಲತತ್ಸುತಯೋಶ್ಚ ಮೃತೌ ಸಜ್ಯೋತಿರಾಶೌಚಮಿತಿ| ಸಜ್ಯೋತಿರ್ದಿವಾಶ್ರವಣೇ ದಿವಾಮಾತ್ರಂ | ರಾತ್ರಿಶ್ರವಣೇ ರಾತ್ರಿಮಾತ್ರಮಿತಿ |

ಟೀ || ತನ್ನ ದೇಶಾಧಿಪತಿ, ತನ್ನ ಗ್ರಾಮಾಧಿಪತಿ, ತನ್ನ ಕುಲಕ್ಕೆ ಯಜಮಾನ ಇವರುಗಳ ಮತ್ತು ಪರೋಕ್ಷದಲ್ಲಿ ಶ್ರೋತ್ರಿಯ ಶಿಷ್ಯರುಗಳ, ಸ್ನೇಹಿತನ, ತನ್ನ ತಂದೆತಾಯಿಗಳ ದೂರಬಂಧುಗಳ, ಭಾವಮೈದನ, ಮತ್ತು ಅವನ ಮಕ್ಕಳ ಮೃತಿಯಲ್ಲಿ ಸಜ್ಯೋತಿರಾಶೌಚವು. ಸಜ್ಯೋತಿಯೆಂದರೆ ಹಗಲು ಶ್ರವಣವಾದರೆ ಹಗಲುಮಾತ್ರ; ರಾತ್ರಿ ಶ್ರವಣವಾದರೆ ರಾತ್ರಿಮಾತ್ರವೆಂದರ್ಥ.

## ೩೨. ಅನುಪನೀತಾನಾಂ ಅವಿವಾಹಿತ ಸ್ತ್ರೀಣಾಂ ಅಸಪಿಂಡಾನಾಂ.

ಅನುಪನೀತಾನಾಮಸಪಿಂಡಾನಾಂ ಅನೂಢಾನಾಮಸಪಿಂಡ ಸ್ತ್ರೀಣಾಂಚ ಮರಣೇ ತತ್ಪ್ರತಿಯೋಗಿನಾಂ ಪುರುಷಾಣಾಮಪಿ ಸ್ನಾನಮಾತ್ರಂ |

ಟೀ || ಉಪನಯನವಿಲ್ಲದ ಅಸಪಿಂಡರುಗಳ ಮರಣದಲ್ಲಿಯೂ, ವಿವಾಹವಿಲ್ಲದ ಅಸಪಿಂಡಸ್ತ್ರೀಯರುಗಳ ಮರಣದಲ್ಲಿಯೂ ಅವರ ಪ್ರತಿಯೋಗಿಗಳಿಗೆ ಪುರುಷರಿಗೂ ಸಹ ಸ್ನಾನಮಾತ್ರವೇ. ಅಸಪಿಂಡರೆಂದರೆ ಜ್ಞಾತಿಗಳಲ್ಲದವರು.

---

## ೩೩. ಅಥ ಸನ್ನಿಪಾತಾಶೌಚ ವಿಷಯಃ.

### ಅಶೌಚ ಸನ್ನಿಪಾತೇ ಜನನಾಶೌಚಂ.

ಅನೇಕಾಶೌಚ ಸನ್ನಿಪಾತೇ ಜ್ಞಾತೀನಾಂ ದಶರಾತ್ರಾಶೌಚ ಮಧ್ಯೇ ಪುನರ್ದಶರಾತ್ರಾಶೌಚೇ ಪ್ರಾಪ್ತೇ ಪೂರ್ವಾಶೌಚ ಶೇಷೇಣ ಶುದ್ಧಿಃ | ಏವಂ ತ್ರಿರಾತ್ರಾಶೌಚ ಮಧ್ಯೇ ತ್ರಿರಾತ್ರಾಶೌಚೇ ಪ್ರಾಪ್ತೇ ಪೂರ್ವಶೇಷೇಣ ಶುದ್ಧಿಃ |

ಟೀ || ಅನೇಕಾಶೌಚ ಸನ್ನಿಪಾತವಾಗುತ್ತಿರಲಾಗಿ ಜ್ಞಾತಿಗಳಿಗೆ ದಶರಾತ್ರಾಶೌಚ ಮಧ್ಯದಲ್ಲಿ ಪುನಃ ದಶರಾತ್ರಾಶೌಚವು ಪ್ರಾಪ್ತವಾದರೆ ಪೂರ್ವಾಶೌಚ

ಶೇಷದಿಂದ ಶುದ್ಧಿಯು. ಹೀಗೆಯೇ ತ್ರಿರಾತ್ರಾಶೌಚ ಮಧ್ಯದಲ್ಲಿ ಪುನಃ ತ್ರಿರಾತ್ರಾಶೌಚವು ಪ್ರಾಪ್ತವಾದರೆ ಪೂರ್ವಾಶೌಚ ಶೇಷದಿಂದ ಶುದ್ಧಿಯು.

## ೩೪. ಸನ್ನಿಪಾತೇ ಶಾವಾಶೌಚಂ.

ತ್ರಿರಾತ್ರ ಶಾವಮಧ್ಯೇ ತ್ರಿರಾತ್ರಶಾವೇ ಪ್ರಾಪ್ತೇ ಪೂರ್ವಶೇಷೇಣ ಶುದ್ಧಿಃ | ತ್ರಿರಾತ್ರ ಜಾತಾಶೌಚ ಮಧ್ಯೇ ತ್ರಿರಾತ್ರಶಾವಾಶೌಚೇ ಪ್ರಾಪ್ತೇ ಶಾವಾಶೌಚ ಶೇಷೇಣ ಶುದ್ಧಿಃ | ದಶರಾತ್ರ ಜಾತಾಶೌಚ ಮಧ್ಯೇ ತ್ರಿರಾತ್ರ ಶಾವೇ ಪ್ರಾಪ್ತೇ ಜಾತಾಶೌಚೇನ ಶುದ್ಧಿಃ | ಶ್ಲೋ || ಸ್ವಭಾವಬಹುಸೂತಿಷು ಸ್ವಲ್ಪಾಶೌಚಾ ವಿಶೋಧಿಸೀ | ಇತಿ | ತ್ರಿರಾತ್ರ ಶಾವಾಶೌಚ ಮಧ್ಯೇ ದಶರಾತ್ರ ಶಾವೇ ಪ್ರಾಪ್ತೇ ದಶರಾತ್ರಶಾವೇನ ಶುದ್ಧಿಃ | ದಶರಾತ್ರ ಶಾವಾಶೌಚ ದಶಮ ದಿನರಾತ್ರೌ, ಜಾತಾಶೌಚಾಂತರೇ ಪ್ರಾಪ್ತೇ ಪೂರ್ವದಶರಾತ್ರಾದೂರ್ಧ್ವಂ ಉತ್ತರಾಶೌಚಂ ದಿನದ್ವಯಮನುಷ್ಠೇಯಂ | ದಶರಾತ್ರ ಶಾವಾಶೌಚಸ್ಯ ದಶಮದಿನ ರಾತ್ರೌ, ಪುನರ್ದಶರಾತ್ರ ಶಾವಾಂತರೇ ಪ್ರಾಪ್ತೇ ಪೂರ್ವಾದೂರ್ಧ್ವಂ ದಿನದ್ವಯ ಮನುಷ್ಠೇಯಂ | ದಶಮದಿನಸ್ಯಾಷ್ಟಮಯಾಮೇ ಸೂರ್ಯೋದಯಾತ್ಪೂರ್ವಂ ದಶರಾತ್ರ ಜಾತಾಂತರೇ ಪ್ರಾಪ್ತೇ ಉತ್ತರಾಶೌಚಂ ಪೂರ್ವಾಶೌಚತಃ ಪರಂ ದಿನತ್ರಯಮನುಷ್ಠೇಯಂ | ಶಾವೇ ಶಾವಾಂತರೇ ಪ್ರಾಪ್ತೇಪ್ಯೇವಮೇವ |

ಟೀ || ತ್ರಿರಾತ್ರ ಮೃತಾಶೌಚ ಮಧ್ಯದಲ್ಲಿ ತ್ರಿರಾತ್ರ ಮೃತಾಶೌಚವು ಪ್ರಾಪ್ತವಾದರೆ ಮೊದಲನೇ ಆಶೌಚಶೇಷದಿಂದ ಶುದ್ಧಿಯು. ತ್ರಿರಾತ್ರ ಜಾತಾಶೌಚ ಮಧ್ಯದಲ್ಲಿ ತ್ರಿರಾತ್ರ ಮೃತಾಶೌಚ ಬಂದರೆ ಮೃತಾಶೌಚ ಶೇಷದಿಂದ ಶುದ್ಧಿಯು. ದಶರಾತ್ರ ಜಾತಾಶೌಚ ಮಧ್ಯದಲ್ಲಿ ತ್ರಿರಾತ್ರ ಶಾವಾಶೌಚ ಪ್ರಾಪ್ತವಾದರೆ ಜಾತಾಶೌಚದಿಂದಲೇ ಶುದ್ಧಿಯು. ತ್ರಿರಾತ್ರ ಮೃತಾಶೌಚ ಮಧ್ಯದಲ್ಲಿ ಹತ್ತುದಿನದ ಮೃತಾಶೌಚ ಪ್ರಾಪ್ತವಾದರೆ ಹತ್ತುದಿನದ ಮೃತಾಶೌಚದಿಂದಲೇ ಶುದ್ಧಿಯು. ದಶರಾತ್ರ ಜಾತಾಶೌಚದ ಹತ್ತನೆಯ ದಿನ ಇನ್ನೊಂದು ಜಾತಾಶೌಚ ಪ್ರಾಪ್ತವಾದರೆ ಪೂರ್ವಾಶೌಚಾನಂತರ ಉತ್ತರಾಶೌಚವನ್ನು ಎರಡು ದಿನ ಅನುಷ್ಠಾನ ಮಾಡಬೇಕು. ದಶರಾತ್ರ ಶಾವಾಶೌಚದ ಹತ್ತನೆಯ ದಿನ ಇನ್ನೊಂದು ದಶರಾತ್ರ ಶಾವಾಶೌಚ (ಮೃತಾಶೌಚ) ಪ್ರಾಪ್ತವಾದರೆ ಮೊದಲನೆಯ ಆಶೌಚಾನಂತರ ಎರಡುದಿನ ಅನುಷ್ಠಾನ ಮಾಡಬೇಕು. ಹತ್ತನೇ

ದಿನದ ಎಂಟನೇ ಯಾಮದಲ್ಲಿ ಸೂರ್ಯೋದಯಾತ್ಪೂರ್ವದಲ್ಲಿ ಇನ್ನೊಂದು ದಶ ರಾತ್ರ ಜಾತಾಶೌಚವು ಪ್ರಾಪ್ತವಾದರೆ ಉತ್ತರಾಶೌಚವನ್ನು ಪೂರ್ವಾಶೌಚಾನಂತರ ಮೂರುದಿನ ಅನುಷ್ಠಾನ ಮಾಡಬೇಕು. ಶಾವಾಶೌಚದಲ್ಲಿ ಇನ್ನೊಂದು ಮೃತಾಶೌಚ ಬಂದರೂ ಹೀಗೆಯೇ.

ಮೂಲ || ಪಿತ್ರೋರಾಶೌಚಮಧ್ಯೇ ಜ್ಞಾತ್ಯಘಸಂಭವೇ ಪಿತ್ರೋರಾಶೌಚಶೇಷೇಣೈವ ಪುತ್ರಾಣಾಂ ಶುದ್ಧಿಃ | ಮಾತಾಪಿತ್ರೋಃ ಪುತ್ರಜನನ ನಿಮಿತ್ತಾಶೌಚಮಧ್ಯೇ ಜ್ಞಾತಿದಶಾಹ ಶಾವಾಶೌಚೇ ಪ್ರಾಪ್ತೇಽಪಿ ಪುತ್ರಜನನ ನಿಮಿತ್ತಾಶೌಚ ಶೇಷೇಣೈವ ಶುದ್ಧಿಃ | ಪುತ್ರಜನನ ನಿಮಿತ್ತಾಶೌಚಮಧ್ಯೇ ಪಿತೃಮಾತೃ ಮರಣೇ ಪ್ರಾಪ್ತೇ ಪಿತೃಮಾತೃಮರಣಾಶೌಚಮೇವಾನುಷ್ಠೇಯಂ | ಪುತ್ರ ಮರಣೇಽಪ್ಯೇವಮೇವ |

ಟೀ || ಮಾತಾಪಿತೃಗಳ ಆಶೌಚಮಧ್ಯದಲ್ಲಿ ಜ್ಞಾತ್ಯಾಶೌಚ ಪ್ರಾಪ್ತವಾದರೆ ಮಾತಾಪಿತ್ರಾಶೌಚ ಶೇಷದಿಂದಲೇ ಎಲ್ಲಾ ಪುತ್ರರಿಗೂ ಶುದ್ಧಿಯು. ಪತ್ನಿಗೂ ಇದೇರೀತಿ ಶುದ್ಧಿಯು. ಪುತ್ರಜನನಾಶೌಚ ಮಧ್ಯದಲ್ಲಿ ಜ್ಞಾತಿ ಶಾವಾಶೌಚ ಪ್ರಾಪ್ತವಾದರೂ ಪುತ್ರಜನನಾಶೌಚ ಶೇಷದಿಂದಲೇ ಮಾತಾಪಿತೃಗಳಿಗೆ ಶುದ್ಧಿಯು. ಪುತ್ರಜನನ ನಿಮಿತ್ತ ಜಾತಾಶೌಚ ಮಧ್ಯದಲ್ಲಿ ಮಾತಾಪಿತೃ ಮರಣದಲ್ಲಿ ಮಾತಾಪಿತೃ ಮರಣಾಶೌಚವನ್ನೇ ಅನುಷ್ಠಾನ ಮಾಡಬೇಕು. ಪಿತ್ರಾಶೌಚ ಮಧ್ಯದಲ್ಲಿ ಪುತ್ರಮರಣವಾದರೂ ಪಿತ್ರಾಶೌಚ ಶೇಷದಿಂದಲೇ ಪುತ್ರಮರಣಾಶೌಚಕ್ಕೂ ಶುದ್ಧಿಯು.

### ೩೫. ಪಿತೃಮರಣಾಶೌಚಮಧ್ಯೇ ಮಾತೃಮರಣೇ.

ಪಿತೃಮರಣಾಶೌಚಮಧ್ಯೇ ಮಾತೃಮರಣೇ ಪಿತುರ್ದಶಾಹಾದೂರ್ಧ್ವಂ ಮಾತ್ರಾಶೌಚಂ ಪೃಥಕ್ ಪಕ್ಷಿಣೀ | ಮಾತೃಮರಣಮಧ್ಯೇ ಪಿತೃಮರಣೇಪ್ರಾಪ್ತೇ ಪಿತೃಮರಣಪ್ರಭೃತಿ ದಶರಾತ್ರಮನುಷ್ಠೇಯಂ | ಅನುಗಮನೇತು ಮಾತುರ್ದಿನಾನ್ತರ ಮರಣೇಽಪಿ ಮಾತ್ರಾಶೌಚಂ ನಪಕ್ಷಿಣೀ ಭವತಿ | ತಯೋಸ್ತಂತ್ರೇಣೈವ ಶುದ್ಧಿಃ | ಪಿತುರ್ದಶಮದಿನೇ ಮಾತೃಮರಣೇ ಪಿತ್ರಾಶೌಚಾದೂರ್ಧ್ವಂ ಮಾತ್ರಾಶೌಚಂ ದಿನದ್ವಯಮನುಷ್ಠೇಯಂ | ಪಿತೃಮರಣಾಶೌಚಮಧ್ಯೇ ದೇಶಾಂತರ ಮಾತೃಮರಣಶ್ರವಣೇ ಮಾತರಿ ಕೃತಕ್ರಿಯಾಯಾ ಮುಭಯೋಸ್ತಂತ್ರೇಣ

ಶುದ್ಧಿಃ | ಮಾತರ್ಯಕೃತಕ್ರಿಯಾಯಾಂ ಪಿತುರ್ದಶಾಹಾದೂರ್ಧ್ವಂ ಮಾತುಃ ಪಕ್ಷಿಣೀ | ಮಾತೃಮರಣಾಶೌಚಮಧ್ಯೇ ದೇಶಾಂತರಗತ ಪಿತೃಮರಣಶ್ರವಣೇ ಶ್ರವಣಪ್ರಭೃತಿ ದಶಾಹಂ ಪ್ರಿತ್ರಾಶೌಚಂ | ದೇಶಾಂತರಗತಯೋರ್ಮಾತಾಪಿ ತ್ರೋರ್ಮರಣೇ ಯುಗಪತ್ ಜ್ಞಾತೇ ತಂತ್ರೇಣಶುದ್ಧಿಃ | ಸಪತ್ನೀಮಾತೃ ವಿಷ ಯೇಪಿ ಜನನೀವತ್ ಸರ್ವಮನುಷ್ಠೇಯಮಿತಿ ಕೇಚಿತ್ | ಸಪತ್ನೀಮಾತುಃ ಕರ್ತೃ ತ್ವಸಂಭವೇ ಜನನೀವತ್ | ನಾನ್ಯಥೇತಿ ಬಹವಃ | ಯಥಾ ದೇಶಕುಲಾಚಾರ ಮಿಹವ್ಯವಸ್ಥಾ |

ಟೀ || ತಂದೆಯ ಮರಣಾಶೌಚ ಮಧ್ಯದಲ್ಲಿ ತಾಯಿಯ ಮೃತಿಸಂಭವದಲ್ಲಿ ತಂದೆಯ ಹತ್ತುದಿವಸದಮೇಲೆ ತಾಯಿಗೆ ಪೃಥಕ್ಪಕ್ಷಿಣೀ ಮಾತ್ರವು. ತಾಯಿಯ ಮರಣಮಧ್ಯದಲ್ಲಿ ತಂದೆಯ ಮೃತಿಯಾದರೆ ತಂದೆಯ ಮರಣಾರಭ್ಯ ದಶರಾತ್ರಾ ಶೌಚವು. ಸಹಗಮನವಾದರೆ ಬೇರೇದಿನದಲ್ಲಿ ಮರಣ ಸಂಭವಿಸಿದಾಗ್ಯೂ ಮಾತ್ರಾ ಶೌಚವೂ ಪಕ್ಷಿಣಿಯೂ ಸಹ ಇಲ್ಲ. ಪಿತೃಮರಣಾದಿಯಾಗಿಯೇ ಆಶೌಚಾ ನುಷ್ಠಾನವು. ಎರಡು ಆಶೌಚಗಳಿಗೂ ಸಮಕಾಲದಲ್ಲಿಯೇ ಶುದ್ಧಿಯು. ತಂದೆಯ ಮರಣದ ಹತ್ತನೆಯ ದಿನದಲ್ಲಿ ತಾಯಿಯ ಮೃತಿಯು ಸಂಭವಿಸಿದರೆ ಪಿತ್ರಾಶೌ ಚಾನಂತರ ಮಾತ್ರಾಶೌಚವು ಎರಡುದಿನ ಮಾತ್ರವು. ತಂದೆಯ ಮರಣಾಶೌಚ ಮಧ್ಯದಲ್ಲಿ ದೇಶಾಂತರಗತಳಾದ ತಾಯಿಯ ಮರಣವು ಶ್ರುತವಾದರೆ ತಾಯಿ ಯು ಕೃತಕ್ರಿಯಳಾಗಿದ್ದರೆ ತಂತ್ರದಿಂದಲೇ ಶುದ್ಧಿಯು. ಮಾತೃವು ಅಕೃತಕ್ರಿಯ ಳಾಗಿದ್ದರೆ ಪಿತ್ರಾಶೌಚಾನಂತರ ಪಕ್ಷಿಣ್ಯಾಶೌಚವು. ಮಾತೃಮರಣಾಶೌಚ ಮಧ್ಯದಲ್ಲಿ ದೇಶಾಂತರಗತನಾದ ಪಿತೃಮರಣವು ಶ್ರುತವಾದರೆ ಶ್ರವಣಾದಿ ದಶಾ ಹಾಶೌಚವು. ದೇಶಾಂತರಗತರಾದ ಮಾತಾಪಿತೃಗಳ ಮರಣವು ಏಕಕಾಲದಲ್ಲಿ ತಿಳಿದರೆ ತಂತ್ರದಿಂದಲೇ ಶುದ್ಧಿಯು. ಸಪತ್ನೀಮಾತೃವಿನ ವಿಷಯದಲ್ಲಿಯೂ ತಾಯಿಯಂತೆಯೇ ಸರ್ವವನ್ನೂ ಅನುಷ್ಠಾನ ಮಾಡಬೇಕೆಂದು ಕೆಲವರ ಮತವು. ಸಪತ್ನೀಮಾತೃವಿಗೆ ಕರ್ತೃವಾದರೆ ಜನನಿಯಂತೆಯೇ ಅನುಷ್ಠಾನ ಮಾಡಬೇಕೆಂದು ಬಹುಜನಮತವು. ದೇಶಕುಲಾಚಾರದಂತೆ ವ್ಯವಸ್ಥೆಯು.

ಮೂಲ || ಅತಿಕ್ರಾಂತ ವರ್ತಮಾನಯೋಃ ಸನ್ನಿಪಾತೇ ವರ್ತಮಾನಾಶೌಚೇನ ಅತಿಕ್ರಾಂತಾಶೌಚಸ್ಯ ಶುದ್ಧಿಃ | ವರ್ತಮಾನಾಶೌಚಾಪೇಕ್ಷಯಾ ಅತಿಕ್ರಾಂ

ತಸ್ಯ ಕಾಲಾಧಿಕ್ಯೇ ಅತಿಕ್ರಾಂತಾಶೌಚೇನೈವ ವರ್ತಮಾನಾಲ್ಪಾಶೌಚಸ್ಯ ಶುದ್ಧಿಃ| ಉಭಯತ್ರಾಗ್ನಿ ದಾತೃತ್ವೇ ಅತಿಕ್ರಾಂತಾಪೇಕ್ಷಯಾ ವರ್ತಮಾನಸ್ಯ ಪ್ರಾಬಲ್ಯಂ| ಮಾತಾಪಿತ್ರ ವಿಷಯೇತು ನಾಯಂವಿಧಿಃ | ಕಿಂತು, ಪೂರ್ಣಮೇವ | ದ್ವಾದಶ ವರ್ಷಾತ್ಪರಂ ಪ್ರೋಷಿತಸಂಸ್ಕಾರಾಶೌಚೇ ಪ್ರತ್ಯಕ್ಷ ಮರಣೇಪ್ಯೇವಮೇವ | ಯದಿ ಜ್ಞಾತಿದಹನಾಶೌಚಮಧ್ಯೇ ಮಾತಾಪಿತರೌ ದಹತಿ ತದಾ ಸಂಪೂರ್ಣಾ ಶೌಚೇನ ಶುದ್ಧಿಃ | ಕಿಂತು ಮಾತಾಪಿತ್ರೋಃ ದಹನಪ್ರಭೃತಿ ಪೂರ್ಣಾಶೌಚಂ | ಯದಿ ಪೂರ್ವಂ ಕಸ್ಯಚಿದ್ದಹನಂ ಕೃತ್ವಾ ತದಾಶೌಚಮಧ್ಯೇ ಅನ್ಯಾನಪಿ ಬಂಧೂ ನೇಕಂ ದ್ವೌ ಬಹೂನ್ವಾ ದಹತಿ ತದಾ ಪೂರ್ವಾಶೌಚೇನೈವೋತ್ತರಸ್ಯಾಪಿ ಶುದ್ಧಿಃ| ಆಶೌಚಾಂತೇ ಷಡ್ಘಟಿಕಾನಂತರಂ ಸ್ನಾನಕಾಲಃ | ಅತಿಕ್ರಾಂತಾಶೌಚಸ್ಯ ಷಡ್ಘಟಿಕಾಯಾಃ ಪೂರ್ವಮಪಿ | ಸಂಧ್ಯಾವಂದನಂ ಸಮಂತ್ರಕಂ ಅರ್ಘ್ಯಪ್ರದಾನಾಂತಂ ಕುರ್ಯಾತ್ | ಅನ್ಯತ್ಸರ್ವಂ ಮನಸಾ ಕುರ್ಯಾತ್ |

ಟೀ|| ಅತಿಕ್ರಾಂತ ವರ್ತಮಾನಾಶೌಚಗಳು ಸನ್ನಿಪಾತವಾದರೆ ವರ್ತಮಾನಾಶೌಚದಿಂದ ಅತಿಕ್ರಾಂತಾಶೌಚಕ್ಕೂ ಶುದ್ಧಿಯು. ವರ್ತಮಾನಾಶೌಚಕ್ಕಿಂತಲೂ ಅತಿಕ್ರಾಂತಾಶೌಚವು ಕಾಲಾಧಿಕವಾಗಿದ್ದರೆ ಅತಿಕ್ರಾಂತಾಶೌಚದಿಂದಲೇ ವರ್ತಮಾನಾಲ್ಪಾಶೌಚಕ್ಕೂ ಶುದ್ಧಿಯು. ಅತಿಕ್ರಾಂತ ವರ್ತಮಾನ ಈ ಎರಡಕ್ಕೂ ಒಬ್ಬನೇ ಕರ್ತೃವಾದರೆ ಅತಿಕ್ರಾಂತಾಶೌಚಕ್ಕಿಂತಲೂ ವರ್ತಮಾನಕ್ಕೆ ಪ್ರಾಬಲ್ಯವು. ಮಾತಾಪಿತೃವಿಷಯದಲ್ಲಿ ಈ ವಿಧಿಯಿಲ್ಲ. ಮಾತಾಪಿತ್ರಾಶೌಚವೇ ಪೂರ್ಣವು. ಹನ್ನೆರಡು ವರ್ಷಾನಂತರದಲ್ಲಿ ಪ್ರೋಷಿತ (ದೇಶಾಂತರಗತನ) ಸಂಸ್ಕಾರಾಶೌಚವನ್ನೂ ಪ್ರತ್ಯಕ್ಷಮರಣದಲ್ಲಿ ಅನುಷ್ಠಾನ ಮಾಡುವಂತೆಯೇ ಮಾಡಬೇಕು. ಜ್ಞಾತಿದಹನಾಶೌಚ ಮಧ್ಯದಲ್ಲಿ ಮಾತಾಪಿತೃಗಳು ದಹನ ಮಾಡಲ್ಪಟ್ಟರೆ ಮಾತಾಪಿತ್ರಾಶೌಚದಿಂದಲೇ ಶುದ್ಧಿಯು. ಮೊದಲು ಒಬ್ಬನ ದಹನಮಾಡಿ ಆ ಆಶೌಚಮಧ್ಯದಲ್ಲಿ ಬಂಧುಗಳ ಪೈಕಿ ಒಬ್ಬನನ್ನಾಗಲೀ, ಇಬ್ಬರನ್ನಾಗಲೀ, ಅನೇಕರನ್ನಾಗಲೀ ದಹನಮಾಡಿದರೂ ಪೂರ್ವಾಶೌಚದಿಂದಲೇ ಶುದ್ಧಿಯು. ಆಶೌಚಾನಂತರದಲ್ಲಿ ಪ್ರಾತಃಕಾಲ ಆರುಘಳಿಗೆಯ ಮೇಲೆ ಸ್ನಾನಕಾಲವು. ಅತಿಕ್ರಾಂತಾಶೌಚಕ್ಕೆ ಆರುಘಳಿಗೆಯೊಳಗೆ ಸ್ನಾನಮಾಡಬಹುದು. ಸಂಧ್ಯಾವಂದನವನ್ನು ಮಂತ್ರಪೂರ್ವಕ ಅರ್ಘ್ಯಪ್ರದಾನಾಂತವಾಗಿ ಮಾಡಿ ಬಾಕಿಯನ್ನು ಮನಸ್ಸಿನಲ್ಲೇ ಧ್ಯಾನಮಾಡಬೇಕು.

## ೩೬. ದುರ್ಮೃತಸ್ಯ ಸನ್ಯಸ್ತಸ್ಯವಾ ಪಿತುರ್ಮರಣಮಧ್ಯೇ ಮಾತೃಮರಣೇ.

ದುರ್ಮೃತಸ್ಯ ಸನ್ಯಸ್ತಸ್ಯವಾ ಪಿತುರ್ಮ್ಮರಣಮಧ್ಯೇ ಮಾತೃಮರಣೇ ಮಾತುಃ ಪಿತೃಮರಣಾಪೇಕ್ಷಯಾ ಪೃಥಜ್ಞಪಕ್ಷಿಣೀಮಾತ್ರಂ | ಮಾತೃಮರಣಾರಭ್ಯ ಪೂರ್ಣಮೇವಾಶೌಚಂ | ಸನ್ಯಸ್ತಪಿತೃಮೃತೌ ಪುತ್ರಾಣಾಮಾಶೌಚಸ್ಯಾಲ್ಪತ್ವಾತ್ | ಪಿತುರ್ದುರ್ಮೃತೌ ಕಾಲಾಂತರೇ ಕ್ರಿಯಾಕರಣಸ್ಯ ಸಾವಕಾಶತ್ವಾದಿತಿ | ಪಿತೃಮರಣಮಧ್ಯೇ ಮಾತುರ್ದುರ್ಮ್ಮರಣೇ ಕ್ರಿಯಾಯಾಃ ಕಾಲಾಂತರ ಕರಣೀಯತ್ವೇನ ಸಾವಕಾಶತ್ವಾನ್ನ ಪಕ್ಷಿಣೀ | ಪಿತುರೇಕೋದ್ದಿಷ್ಟಾದೇರ್ನ್ನಲೋಪಃ | ಸದ್ಯೋಮಾತುಶ್ಚ ಕ್ರಿಯಾಕರಣಪಕ್ಷೇ ಮಾತುಃ ಪೃಥಕ್ಪಕ್ಷಿಣೀ ಭವತ್ಯೇವ | ತತ್ಪಕ್ಷಿಣೀ ಮಧ್ಯೇಪಿ ಪಿತುರೇಕೋದ್ದಿಷ್ಟಂ ಕುರ್ಯಾತ್ | ಇತ್ಯಭಿನವಷಡಶೀತೌ | ಟೀ || ತಂದೆಯು ದುರ್ಮ್ಮೃತನಾಗಲೀ, ಸನ್ಯಾಸಿಯಾಗಿ ಮೃತನಾಗಲೀ, ಆಗಿದ್ದರೆ ಆ ಪಿತೃಮೃತಾಶೌಚ ಮಧ್ಯದಲ್ಲಿ ಮಾತೃಮೃತಿಯು ಸಂಭವಿಸಿದರೆ ಮಾತ್ರಾಶೌಚವನ್ನು ಮಾತೃಮರಣಾದಿ ಪೂರ್ಣವಾಗಿ ಅನುಷ್ಠಾನ ಮಾಡಬೇಕು, ಪಿತ್ರಾಶೌಚಾನಂತರ ಪಕ್ಷಿಣೀಮಾತ್ರವಲ್ಲ. ಸನ್ಯಾಸಿಯ ಮರಣದಲ್ಲೂ, ದುರ್ಮ್ಮೃತಿಯಲ್ಲೂ ಪುತ್ರರಿಗೆ ಆಶೌಚ ಕಡಿಮೆಯಾದುದರಿಂದ ಮಾತ್ರಾಶೌಚವು ಹೆಚ್ಚು. ದುರ್ಮ್ಮೃತನಾದ ತಂದೆಗೆ ಕಾಲಾಂತರದಲ್ಲಿ ಸಂಸ್ಕಾರವು ಉಕ್ತವಾದ್ದರಿಂದ ಸಂಸ್ಕಾರಾದ್ಯಾಶೌಚವು ಪುತ್ರರಿಗೆ ಅಧಿಕವು. ತತ್ಪೂರ್ವ್ವ ಕಡಿಮೆಯಾದ್ದರಿಂದ ಮಾತ್ರಾಶೌಚವು ಈ ಪ್ರಕರಣದಲ್ಲಿ ಹೆಚ್ಚೆಂದು ಶಾಸ್ತ್ರದಲ್ಲಿದೆ. ಸದ್ಯಃ ಕ್ರಿಯಾಮಾಡುವ ಪಕ್ಷದಲ್ಲಿ ಉತ್ತರಾಶೌಚಾನಂತರ ಮಾತೃವಿಗೆ ಪೃಥಕ್ಪಕ್ಷಿಣಿಯೇ. ಪಿತೃಮರಣಾಶೌಚದಲ್ಲಿ ಮಾತೃವಿಗೆ ದುರ್ಮ್ಮೃತಿಯಾದರೂ ಪಿತೃವಿನ ಏಕೋದ್ದಿಷ್ಟಾದಿಗಳನ್ನು ಸ್ವಸ್ವಕಾಲದಲ್ಲೇ ನಡೆಸಬೇಕು. ಮಾತೃವಿಗೆ ಪೃಥಕ್ಪಕ್ಷಿಣಿ ಇಲ್ಲ. ಮಾತೃವಿಗೆ ಆಗಲೇ ಕ್ರಿಯಾ ನಡೆಸುವಪಕ್ಷದಲ್ಲಿ ಪಿತ್ರಾಶೌಚಾನಂತರ ಮಾತ್ರಾಶೌಚವು ಪೃಥಕ್ಪಕ್ಷಿಣಿಯುಂಟು. ಆಗಲೂ ಪಿತೃಕರ್ಮಕ್ಕೆ ಅಟಂಕವಿಲ್ಲವು. ಸ್ವಸ್ವ ಕಾಲದಲ್ಲಿ ಜಲಾಂಜಲಿ ಏಕೋದ್ದಿಷ್ಟಾಂತ ಕರ್ಮವನ್ನು ನಡೆಸಬಹುದೆಂದು ಷಡಶೀತಿಯಲ್ಲಿದೆ,

## ೩೭. ರಜಸ್ವಲಾಯಾಃ.

ರಜಸ್ವಲಾಯಾಶ್ಚತುರ್ಥ ದಿವಸೇ ಸಂಗವೇ ಸಚೇಲಸ್ನಾನಂ | ತದ್ದಿನೇ ಭರ್ತೃಶುಶ್ರೂಷಾದಿ ಸಾಮಾನ್ಯ ಗೃಹಕರ್ಮಾದೌ ಶುದ್ಧಿಃ | ಹೋಮಾದಿ ದೇವ ಪಿತೃ ಕರ್ಮಾದೌ ಪಂಚಮೇಹ್ನಿ ಸ್ನಾನಾನಂತರಂ ಶುದ್ಧಿಃ | ತಥಾಚ :—

ಶ್ಲೋ || ಶುದ್ಧಾ ಭರ್ತುಶ್ಚತುರ್ಥೇಽಹ್ನಿ ಸ್ನಾತಾ ನಾರೀ ರಜಸ್ವಲಾ |
ದೈವೇ ಕರ್ಮಣಿ ಪಿತ್ರ್ಯೇಚ ಪಂಚಮೇಽಹನಿ ಶುದ್ಧ್ಯತಿ ||

ಇತ್ಯುಕ್ತಂ | ಸ್ಮೃತ್ಯಂತರೇ :—ರಜೋಽನುವೃತ್ತೌ ಸತ್ಯಾಂ ಸಪ್ತದಿನ ಪರ್ಯಂತಂ ದೈವಪಿತ್ರ್ಯಾದೌ ಸಾಧಿಕಾರಃ |

ಟೀ || ರಜಸ್ವಲೆಯಾದ ಸ್ತ್ರೀಯು ನಾಲ್ಕನೆಯ ದಿಸ ಸಂಗವಕಾಲದಲ್ಲಿ ಸಚೇಲಸ್ನಾನ ಮಾಡಬೇಕು. ಆ ದಿವಸ ಪತಿಶುಶ್ರೂಷಾದಿ ಸಾಮಾನ್ಯವಾದ ಮನೆಕೆಲಸಗಳಿಗೆ ಮಾತ್ರಶುದ್ಧಿಯು. ಹೋಮವೇ ಮೊದಲಾದ ದೇವಪಿತೃ ಕರ್ಮಗಳನ್ನು ಮಾಡುವುದಕ್ಕೆ ಐದನೇದಿನ ಸ್ನಾನಾನಂತರ ಶುದ್ಧಿಯು. ರಜಸ್ಸು ಅನುವರ್ತಿಸಿಕೊಂಡಿದ್ದರೆ ಏಳುದಿವಸದ ಪರ್ಯಂತವೂ ದೈವಪಿತ್ರ್ಯಾದಿ ಕರ್ಮಗಳಲ್ಲಿ ಅಧಿಕಾರವಿಲ್ಲ.

## ೩೮. ಸ್ತ್ರೀಕರ್ತೃಕ ಶ್ರಾದ್ಧಂ ರಜಸ್ವಲಾ ಕಾಲಾನ್ತರಿತಂ ಚೇತ್,

ಪಂಚಮೇಽಹ್ನಿ ಸ್ನಾನಾನಂತರಂ ಕಾರ್ಯಂ | ಶ್ರಾದ್ಧದಿನೇ ರಜೋತ್ಪತ್ತೌ ವಸಿಷ್ಠಃ |

ಶ್ಲೋ || ಪಾಕೋಪಕ್ರಮಣಾದೂರ್ಧ್ವಂ ಯದಿವಾಸ್ಯಾನ್ನಿಮಂತ್ರಣಾತ್|
ರಜಸ್ವಲಾ ಪುತ್ರಹೀನಾ ಕಾರಯೇದೃತ್ವಿಗಾದಿನಾ ||

ಯಮಃ—

ಶ್ಲೋ || ಯಾತು ಪಾಕಮುಪಕ್ರಮ್ಯ ನಾರೀ ಯದಿ ರಜಸ್ವಲಾ |
ಬ್ರಾಹ್ಮಣಂ ವರಯಿತ್ವಾ ಯಾ ಶ್ರಾದ್ಧಕರ್ಮ ಸಮಾಪಯೇತ್ ||
ಶ್ರಾದ್ಧಕರ್ಮ ಉಪಕ್ರಮ್ಯ ನಾರೀವಾ ಪುರುಷೋಽಪಿವಾ |
ಶ್ರಾದ್ಧಂತು ಕಾರಯೇದ್ವಿಪ್ರೈ ರೋಗೀವಾ ಸೂತಕೀ ಭವೇತ್ ||

ಇತಿ ವಚಸ್ಯೈಃ ಪಾಕಾರಂಭಾನಂತರಂ ರಜಃಪ್ರಾದುರ್ಭಾವೇ ಋತ್ವಿಗಾದಿನಾ ಶ್ರಾದ್ಧಂ ಕಾರಯೇದಿತಿ ಕೇಚಿತ್ | ತೃತೀಯವ್ಯವರಣಾನಂತರಂ ರಜಃಪ್ರಾದುರ್ಭಾವೇಚೇತ್ ಋತ್ವಿಗಾದಿನಾ ಸಮಾಪಯೇತ್ | ಅನ್ಯಥಾ ನಕಾರಯೇದಿತಿ ಬಹವಃ |

ಟೀ || ರಜಸ್ವಲೆಯಾಗಿರುವಾಗ ಶ್ರಾದ್ಧವು ಪ್ರಾಪ್ತವಾದರೆ ಸ್ನಾನಾನಂತರ ಐದನೆಯ ದಿವಸ ಶ್ರಾದ್ಧವನ್ನು ಮಾಡಬೇಕು. ಶ್ರಾದ್ಧದಿಸ ರಜೋತ್ಪತ್ತಿ

ಯಾದರೆ ಪಾಕಾರಂಭವಾಗಿದ್ದಪಕ್ಷೆ ಋತ್ವಿಕರುಗಳಿಂದ ಶ್ರಾದ್ಧ ಮಾಡಿಸಬೇಕೆಂದು ಕೆಲವರ ಮತವು. ತೃತೀಯ್ಯವರಣಾನಂತರ ರಜೋತ್ಪತ್ತಿಯಾದರೆ ಮಾತ್ರ ಋತ್ವಿಕರಿಂದ ಶ್ರಾದ್ಧ ಮಾಡಿಸಬೇಕೆಂದೂ ತತ್ಪೂರ್ವವಾದರೆ ಋತ್ವಿಕಾದಿಗಳಿಂದಲೂ ಮಾಡಿಸಕೂಡದೆಂದೂ, ಬಹುಮತವು. ದೇಶಕುಲಾಚಾರದಂತೆ ವ್ಯವಸ್ಥೆಯು,

## ೩೯. ಮರಣ ದಹನ ಕಾಲಭೇದೇನಾಶೌಚಭೇದಃ.

ಆಹಿತಾಗ್ನೇರ್ಮರಣಾದಿ ಸಂಸ್ಕಾರಾಭಾವೇ ಸಂಸ್ಕಾರದಿನ ಪ್ರಭೃತ್ಯಾಶೌಚಂ ಪೂರ್ಣಮನುಷ್ಠೇಯಂ | ನ ಮರಣದಿನಾದ್ಯಾಶೌಚಂ | ಬುದ್ಧಿಪೂರ್ವಂ ದುರ್ಮೃತಾನಾಮಪಿ ಸಂಸ್ಕಾರದಿನಾದ್ಯಾಶೌಚಂ ಸಪಿಂಡಾದಿಭಿಃ ಕಾರ್ಯಂ | ಬುದ್ಧಿಪೂರ್ವಮರಣೇ ಆಹಿತಾಗ್ನ್ಯನಾಹಿತಾಗ್ನ್ಯೋ ರುಭಯೋರಪಿ ಪುನರ್ದಹನಾತ್ಪೂರ್ವಂ ಪುತ್ರಾಣಾಂ ಜ್ಞಾತೀನಾಂಚಾಶೌಚಂ ನಾಸ್ತಿ | ಕಿಂತು ಪುನರ್ದಹನಪ್ರಭೃತ್ಯೇವಾಶೌಚಂ | ದೈವಾದಬುದ್ಧಿಪೂರ್ವಕ ದುರ್ಮೃತಾ ಸದ್ಯಸ್ಸಂಸ್ಕಾರೋ ಮರಣಾದ್ಯಾಶೌಚಮೇವೇತಿ ಪೂರ್ವಮುಪ್ಯುಕ್ತಂ | ಸಂಸ್ಕಾರಾತ್ಪೂರ್ವಂ ಪುತ್ರಾದೀನಾ ಮಾಶೌಚಾಭಾವೇಪಿ ಪುತ್ರಾಣಾಂ, ಪತ್ನ್ಯಾಃ, ಪತ್ನ್ಯುರ್ಜ್ಞಾತೀನಾಂಚ ಅವಶ್ಯಕರಣೀಯ ಸಂಧ್ಯಾವಂದನಾದಿ ನಿತ್ಯಕರ್ಮ ಸಾಂವತ್ಸರಿಕ ಶ್ರಾದ್ಧಮಂತರ ಇತರ ಹವ್ಯಕವ್ಯಾದಿಷ್ವನಧಿಕಾರಃ |

ಶ್ಲೋ || ಅಕೃತೇ ಜ್ಞಾತಿಸಂಸ್ಕಾರೇ ನಕುರ್ಯಾ ದಾತ್ಮನಶ್ಶುಭಂ |
ಹವ್ಯಂ ದೇವಾ ನಗೃಹ್ಣಂತಿ ಕವ್ಯಂಚ ಪಿತರಸ್ತಥಾ ||

ಇತ್ಯುಕ್ತತ್ವಾತ್ | ಇದಂ ಷಡಶೀತಿಕಾರಮತಂ | ವೈದ್ಯನಾಥ, ವೈದಿಕ ಸಾರ್ವಭೌಮಾದಿಮತೇತು ಬುದ್ಧಿಪೂರ್ವಾಬುದ್ಧಿಪೂರ್ವ ದುರ್ಮರಣೇಪಿ ಮರಣದಿನ ಸಂಸ್ಕಾರದಿನಾದ್ಯಾಶೌಚಾನುಷ್ಠಾನ ವಿಕಲ್ಪಃ | ಮರಣಾದಿ ಗೃಹೀತಾಶೌಚಾನಾಂ ದತ್ತೋದಕಾನಾಂ ನ ಪುನಸ್ಸಂಸ್ಕಾರೇ ಆಶೌಚಂ | ಮುಖ್ಯಕರ್ತೃ ವ್ಯತಿರಿಕ್ತ ಜ್ಞಾತೀನಾಂ ಸ್ವೋಚಿತ ಹವ್ಯ ಕವ್ಯ ಪುತ್ರೀಪುತ್ರ ವಿವಾಹಾದಿ ಸರ್ವ ಶುಭಕರ್ಮಾನರ್ಹತ್ವಂಚ | ಇತಿ | ಇದಾನೀಂ ಪ್ರಾಯಶಸ್ಸರ್ವತ್ರ ಏವಮೇವ ಶಿಷ್ಟಾಚಾರಶ್ಚ ದೃಶ್ಯತೇ | ಮರಣಾದ್ಯಗೃಹೀತಾಶೌಚಾನಾಂ ಸರ್ವೇಷಾಂ ಸಂಸ್ಕಾರದಿನಾ ದ್ಯಾಶೌಚಮನುಷ್ಠೇಯಂ |

ಟೀ || ಆಹಿತಾಗ್ನಿಗೆ ಮರಣಾದಿ ಸಂಸ್ಕಾರ ಮಾಡಲ್ಪಡದೇ ಇದ್ದರೆ ಸಂಸ್ಕಾರದಿನಾರಭ್ಯ ಆಶೌಚವನ್ನು ಪೂರ್ಣವಾಗಿ ಅನುಷ್ಠಾನ ಮಾಡಬೇಕು. ಮರಣಾದಿಯಾಗಿ ಆಶೌಚವಿಲ್ಲ. ಬುದ್ಧಿಪೂರ್ವಕವಾಗಿ ದುರ್ಮೃತಿಯಾದವರಿಗೆ ಸಂಸ್ಕಾರದಿನಾಗಭ್ಯ ಜ್ಞಾತಿಗಳಿಂದ ಆಶೌಚಾನುಷ್ಠಾನ ಮಾಡಲ್ಪಡಬೇಕು. ಬುದ್ಧಿಪೂರ್ವಕವಾದ ಮರಣದಲ್ಲಿ ಆಹಿತಾಗ್ನಿ, ಅನಾಹಿತಾಗ್ನಿಗಳಿಗೂ ಕೂಡ ಪುನರ್ದಾಹಾತ್ಪೂರ್ವದಲ್ಲಿ ಪುತ್ರರಿಗೂ ಜ್ಞಾತಿಗಳಿಗೂ ಆಶೌಚವಿಲ್ಲ. ಆದರೆ ಪುನರ್ದಹನಾರಭ್ಯ ಆಶೌಚಾನುಷ್ಠಾನವು. ದೈವಾತ್ ದುರ್ಮೃತಿ ಪ್ರಾಪ್ತವಾದರೆ ಸದ್ಯಃ ಸಂಸ್ಕಾರ ಮಾಡುವಪಕ್ಷೆ ಮರಣಾದ್ಯಾಶೌಚವು. ಸಂಸ್ಕಾರಾತ್ಪೂರ್ವದಲ್ಲಿ ಪುತ್ರಾದಿಗಳಿಗೆ ಆಶೌಚವಿಲ್ಲದೇ ಇದ್ದಾಗ್ಯೂ ಪುತ್ರರುಗಳಿಗೂ, ಪತ್ನಿಗೂ, ಗಂಡನಿಗೂ, ಜ್ಞಾತಿಗಳಿಗೂ ಕೂಡ ಅವಶ್ಯ ಮಾಡಬೇಕಾದ ಸಂಧ್ಯಾವಂದನಾದಿ ನಿತ್ಯಕರ್ಮ ಸಾಂವತ್ಸರಿಕ ಶ್ರಾದ್ಧ ಏನಹ ಇತರ ಹವ್ಯಕವ್ಯಾದಿಗಳಲ್ಲಿ ಅಧಿಕಾರವಿಲ್ಲ. ಇದು ಷಡಶೀತಿಕಾರರ ಮತವು. ವೈದ್ಯನಾಥ, ವೈದಿಕಸಾರ್ವಭೌಮರ ಮತವಾದರೋ ಬುದ್ಧಿಪೂರ್ವ ಅಬುದ್ಧಿಪೂರ್ವ ಮರಣದಲ್ಲಿಯೂ ಕೂಡ ಮರಣದಿನ ಸಂಸ್ಕಾರದಿನಾದ್ಯಾಶೌಚಾನುಷ್ಠಾನಗಳು ವಿಕಲ್ಪವಾಗಿವೆ. ಮರಣಾದಿಯಾಗಿ ಆಶೌಚಾನುಷ್ಠಾನ ಮಾಡಿದವರಿಗೂ, ಉದಕದಾನ ಮಾಡಿದವರಿಗೂ ಸಂಸ್ಕಾರದಿನಾರಭ್ಯ ಪುನಃ ಆಶೌಚವಿಲ್ಲ. ಮುಖ್ಯಕರ್ತೃ ವ್ಯತಿರಿಕ್ತರಾದ ಜ್ಞಾತಿಗಳಿಗೆ ತಮಗೆ ಉಚಿತವಾದ ಹವ್ಯಕವ್ಯಾದಿಗಳನ್ನೂ ಪುತ್ರೀಪುತ್ರ ವಿವಾಹಾದಿ ಶುಭಕರ್ಮಗಳನ್ನೂ ಮಾಡುವುದಕ್ಕೆ ಅರ್ಹತೆಯುಂಟು. ಇದೇ ಎಲ್ಲಾ ಕಡೆಗಳಲ್ಲಿಯೂ ಬಹುವಾಗಿ ಶಿಷ್ಟಾಚಾರದಲ್ಲಿದೆ. ಮರಣದಿನಾದಿಯಾಗಿ ಆಶೌಚಾನುಷ್ಠಾನ ಮಾಡದೇ ಇರುವ ಎಲ್ಲಾ ಜ್ಞಾತಿಗಳಿಗೂ ಸಂಸ್ಕಾರದಿನ ಮೊದಲು ಆಶೌಚಾನುಷ್ಠಾನವನ್ನು ಮಾಡಬೇಕು.

## ೪೦. ಅತಿಕ್ರಾಂತಾಶೌಚಭೇದಾಃ.

ಶ್ಲೋ || ಆತ್ರಿಮಾಸಾತ್ತ್ರಿರಾತ್ರಂಸ್ಯಾತ್ ಷಣ್ಮಾಸಾತ್ಪಕ್ಷಿಣೀ ತಥಾ |
ಪರಮೇಕಾಹಮಾವರ್ಷಾ ದೂರ್ಧ್ವಂ ಸ್ನಾನೇನ ಶುಧ್ಯತಿ ||

ಪೂರ್ಣಾಶೌಚಿನಾಂ ದಶಾಹಾದೂರ್ಧ್ವಂ ತ್ರಿಮಾಸಪರ್ಯಂತಂ ತ್ರಿವಣೇ ತ್ರಿರಾತ್ರಂ | ತತಷ್ಷಣ್ಮಾಸಪರ್ಯಂತಂ ಪಕ್ಷಿಣೀ | ಸಪ್ತಮಮಾಸಪ್ರಭೃತಿ ವತ್ಸರಪೂರ್ತಿಪರ್ಯಂತ ಮೇಕರಾತ್ರಂ | ವತ್ಸರಾದೂರ್ಧ್ವಂ ಸ್ನಾನಮಾತ್ರಂ | ಇದಂ

ಕೃತಕ್ರಿಯ ಜ್ಞಾತಿಮೃತಿ ವಿಷಯಂ | ಷಣ್ಮಾಸಾದೂರ್ಧ್ವಂ ಆವತ್ಸರಂ ಏಕರಾತ್ರಾಶೌಚಂ ಷಡಶೀತಿ ಶತಕಕಾರ ಪಕ್ಷಯೋಸ್ಸಮಾಸಂ | ವೈದ್ಯನಾಥಪಕ್ಷೇತು ಷಣ್ಮಾಸಾದಾರಭ್ಯ ನವಮಮಾಸಪರ್ಯಂತ ಮೇಕಾಹಃ | ತದೂರ್ಧ್ವಂ ಸ್ನಾನಂ | ಅಯಮಾಶೌಚವಿಕಲ್ಪಃ ಏಕದೇಶ ಭಿನ್ನದೇಶ ಭೇದೇನ ವಿಕಲ್ಪ ಇತಿ ಪ್ರತಿಪಾದಿತಃ| ಅತೋ ಭಿನ್ನದೇಶ ಮೃತಿಶ್ರವಣೇ ನವಮಮಾಸಾದೂರ್ಧ್ವಂ ಸ್ನಾನಂ | ಏಕಸ್ಮಿನ್ ದೇಶೇ ಮೃತಿಶ್ರವಣೇ ಷಣ್ಮಾಸಾದಿ ವತ್ಸರಾಂತಮೇಕದಿನಂ ಇತಿ ವ್ಯವಸ್ಥಾಕೃತಾ | ಯಥಾ ಶಿಷ್ಟಸ್ವಕುಲಾಚಾರಂ ವ್ಯವಸ್ಥಾ ಜ್ಞೇಯಾ |

ಟೀ|| ಪೂರ್ಣಾಶೌಚಗಳಿಗೆ ಹತ್ತುದಿನಕ್ಕೆ ಮೇಲೆ ಮೂರುತಿಂಗಳು ಪೂರ್ತಿಪರ್ಯಂತ ಆಶೌಚ ಶ್ರವಣವಾದರೆ ತ್ರಿರಾತ್ರವು. ಅನಂತರ ಆರುತಿಂಗಳು ಪೂರ್ತಿಯಾಗುವವರೆಗೆ ಪಕ್ಷಿಣಿಯು. ಏಳನೇಮಾಸ ಮೊದಲು ವತ್ಸರಪೂರ್ತಿಯವರೆಗೆ ಒಂದು ದಿನವು. ವತ್ಸರಾನಂತರ ಸ್ನಾನಮಾತ್ರವು. ಇದು ಸಂಸ್ಕಾರವನ್ನು ಪಡೆದ ಜ್ಞಾತಿವಿಷಯವು. ಆರುತಿಂಗಳಿಗೆ ಮೇಲೆ ವತ್ಸರಪೂರ್ತಿಯವರೆಗೆ ಒಂದು ದಿನಾಶೌಚವೆಂಬುವ ಪಕ್ಷವು ಅಭಿನವಷಡಶೀತಿ ಶತಕಕಾರರಿಗೂ ಸಮಾಸವು. ವೈದ್ಯನಾಥಪಕ್ಷದಲ್ಲಾದರೋ ಷಣ್ಮಾಸಾನಂತರ ಒಂಭತ್ತು ತಿಂಗಳವರೆಗೂ ಒಂದು ದಿನವು. ಅದಕ್ಕೆಮೇಲೆ ಸ್ನಾನವು. ಈ ಆಶೌಚವಿಕಲ್ಪವು ಒಂದುದೇಶ, ದೇಶಾಂತರ ಭೇದದಿಂದ ವಿಕಲ್ಪವೆಂದು ಹೇಳಲ್ಪಟ್ಟಿತು. ಆದುದರಿಂದ ಭಿನ್ನದೇಶ ಮೃತಿಶ್ರವಣದಲ್ಲಿ ಒಂಭತ್ತು ತಿಂಗಳಿಗೆ ಮೇಲೆ ಸ್ನಾನವೇ. ಒಂದೇ ದೇಶವಾಗಿದ್ದ ಪಕ್ಷದಲ್ಲಿ ಆರು ತಿಂಗಳಿಗೆ ಮೇಲೆ ವರ್ಷಪೂರ್ತಿ ಪರ್ಯಂತವೂ ಒಂದುದಿನಾಶೌಚವೆಂದು ವ್ಯವಸ್ಥೆ ಮಾಡಲ್ಪಟ್ಟಿತು. ಶಿಷ್ಟಕುಲಾಚಾರದಂತೆ ವ್ಯವಸ್ಥೆಯು.

### ೪೧. ಪುತ್ರವಿಷಯೇ ದೇಶಾಂತರೇ.

ದಶಾಹಾದೂರ್ಧ್ವಂ ವಿಂಶತಿವತ್ಸರ ಪರ್ಯಂತಂ ಕೃತಕ್ರಿಯಾಕೃತಕ್ರಿಯಯೋರಪಿ ಪಿತ್ರೋರ್ಮೃತಿಶ್ರುತೌ ಸರ್ವಪುತ್ರಾಣಾಂ ಪತ್ನ್ಯಾಶ್ಚ ಸದಾ ದಶಾಹಂ | ದ್ರಾವಿಡಾಸ್ತು ಸಂವತ್ಸರಾನಂತರಮೇವ ಪಿತ್ರೋಃ ಕೃತಕ್ರಿಯತ್ವೇ ಪುತ್ರಾಣಾಂ ತ್ರಿರಾತ್ರಮಿತ್ಯಾಹುಃ | ತತ್ರಾಪಿ ಕನಿಷ್ಠಸ್ಯ ತ್ರಿರಾತ್ರಂ ಜ್ಯೇಷ್ಠಸ್ಯ ಸದಾ ದಶಾಹಮಿತಿ ಕೇಚಿತ್ |

ಟೀ || ದಶಾಹಾನಂತರ ಇಪ್ಪತ್ತು ವರ್ಷದವರೆಗೂ ಕೃತಕ್ರಿಯರಾಗಲೀ. ಕ್ರಿಯೆ ಮಾಡಲ್ಪಡದೇ ಇರಲೀ ಮಾತಾಪಿತೃಗಳ ಮೃತಿಶ್ರವಣದಲ್ಲಿ ಸರ್ವಪುತ್ರ

ರಿಗೂ ಪತ್ನಿಗೂ ಸದಾ ದಶಾಹಾಶೌಚವು. ದ್ರಾವಿಡರಾದರೋ ಒಂದುವರ್ಷಕ್ಕೆ ಮೇಲೆಯೇ ಕೃತಕ್ರಿಯರಾದ ಮಾತಾಪಿತೃಗಳ ಮೃತಿಶ್ರವಣದಲ್ಲಿ ಪುತ್ರರಿಗೆ ತ್ರಿರಾತ್ರವೆಂದು ಹೇಳುವರು. ಅದರಲ್ಲೂ ಕನಿಷ್ಠಪುತ್ರರಿಗೆ ತ್ರಿರಾತ್ರವೆಂದೂ ಜ್ಯೇಷ್ಠಪುತ್ರನಿಗೂ ಪತ್ನಿಗೂ ದಶರಾತ್ರವೆಂದೂ ಕೆಲವುಪಕ್ಷವು.

## ೪೨ ಸಪಿಂಡಾನಾಂ ದೇಶಾಂತರಮರಣೇ ದಶಾಹಾದೂರ್ಧ್ವಂ ಸ್ನಾನಮಿತಿ.

ಅತ್ರ, ಸಪತ್ನೀ, ದಂಪತೀ, ಮಾತಾಪಿತೃ ವ್ಯತಿರಿಕ್ತಾನಾಂ ಸಪಿಂಡಾನಾಂ ತ್ರಿಂಶದ್ಯೋಜನ ವ್ಯವಹಿತ ದೇಶಾಂತರಮರಣೇ ಸ್ನಾನಮಾತ್ರಂ | ತತ್ರೈವ ದಶಾಹಮಧ್ಯೇ ಶ್ರವಣೇ ತಚ್ಛೇಷೇಣೈವ ಶುದ್ಧಿಃ | ತ್ರಿರಾತ್ರಂ ತ್ರಿಷುಮಾಸೇಷ್ವಿತ್ಯೇಕಃ ಪಕ್ಷಃ | ಯಥಾ ಕುಲಾಚಾರಂ ವ್ಯವಸ್ಥಾ |

ಟೀ || ಪರಸ್ಪರ ಸವತಿಯರಿಗೂ, ಪರಸ್ಪರ ದಂಪತಿಗಳಿಗೂ, ಮಾತಾಪಿತೃವ್ಯತಿರಿಕ್ತರಾದ ಜ್ಞಾತಿಗಳಿಗೂ ಮೂವತ್ತು ಯೋಜನದ ಆಚೆ ಇರುವ ದೇಶಾಂತರದಲ್ಲಿ ಮರಣವಾದರೆ ಸ್ನಾನಮಾತ್ರವು. ದಶಾಹಮಧ್ಯವಾಗಿದ್ದರೆ ಶೇಷದಿನದಿಂದ ಶುದ್ಧಿಯು. ಮೂರು ತಿಂಗಳವರೆಗೆ ಮೂರು ದಿವಸವೆಂದು ಕೆಲವರ ಪಕ್ಷವು. ತಮ್ಮ ಕುಲಾಚಾರದಂತೆ ವ್ಯವಸ್ಥೆಯು.

## ೪೩. ದಾಹಕಸ್ಯ.

ಅನ್ಯಾಶೌಚ ಮಧ್ಯೇ ದಾಹ ಕರ್ತೃತ್ವ ಸಂಭವೇ ಅನೇಕದಾಹ ಕರ್ತೃತ್ವ ಸಂಭವೇಪಿ ಪ್ರಥಮ ದಹನ ನಿಮಿತ್ತಾಶೌಚ ಶೇಷೇಣೈವ ಸರ್ವೇಷಾಂ ಶುದ್ಧಿಃ | ತತ್ರ ಪ್ರೇತಕೃತ್ಯಾನಾಂ ಸಮಾಪ್ತಿಶ್ಚ | ಏಕೋದ್ದಿಷ್ಟಂತು ತತ್ತದುಕ್ತಕಾಲೇ ಕರ್ತವ್ಯಂ | ತತ್ತತ್ಕರಣಕಾಲ ಮಾತ್ರಮಾಶೌಚಂ | ಪಶ್ಚಾತ್ಸ್ನಾನೇನ ಶುಧ್ಯತೀತಿ | ದಾಹಕಸ್ಯ ಪುತ್ರಜನನೇಪಿ ದಹನನಿಮಿತ್ತಾಶೌಚ ಶೇಷೇಣ ಜನನಾಶೌಚಸ್ಯಾಪಿ ಶುದ್ಧಿರಿತಿ ಕೇಚಿತ್ | ಪುತ್ರಜನನಾಶೌಚಂ ಪೃಥಗನುಷ್ಠೇಯಮಿತಿ ಆಶ್ವಲಾಯನಾಃ | ದ್ರಾವಿಡಪಕ್ಷಾಶೌಚ ನಿರ್ಣಯಾವಸರೇ ಪೂರ್ವಂ ಪ್ರತಿಪಾದಿತಂ |

ಟೀ || ಬೇರೆ ಆಶೌಚಮಧ್ಯದಲ್ಲಿ ದಹನ ಕರ್ತೃತ್ವ ಸಂಭವಿಸಿದರೆ ಅನೇಕ ದಹನ ಕರ್ತೃತ್ವ ಸಂಭವಿಸಿದರೂ ಮೊದಲು ದಹನ ನಿಮಿತ್ತಾಶೌಚ ಶೇಷದಿಂದ ಶುದ್ಧಿಯು. ಮತ್ತು ಎಲ್ಲಾ ಪ್ರೇತಕಾರ್ಯಗಳನ್ನೂ ಪ್ರಥಮ ದಹನಾಶೌಚ ಕಾಲ

ದಲ್ಲೇ ಮಾಡಬೇಕು. ಏಕೋದ್ದಿಷ್ಟವನ್ನು ಮಾತ್ರ ಆಯಾಯ ಉಕ್ತಕಾಲಗ ಳಲ್ಲೇ ಮಾಡಬೇಕು. ಅಂತಿಮ ಕ್ರಿಯೆ ಮಾಡುವಾಗ ಮಾತ್ರ ಆಶೌಚವು. ಅನಂತರ ಸ್ನಾನದಿಂದ ಶುದ್ಧಿಯು. ದಾಹಕನಿಗೆ ಪುತ್ರಜನನವಾದಾಗ್ಯೂ ದಹನ ನಿಮಿತ್ತಾಶೌಚ ಶೇಷದಿಂದಲೇ ಜನನಾಶೌಚಕ್ಕೂ ಶುದ್ಧಿಯೆಂದು ಕೆಲವರ ಮತವು. ಪುತ್ರಜನನಾಶೌಚವನ್ನು ಬೇರೆಯಾಗಿ ಅನುಷ್ಠಾನ ಮಾಡಬೇಕೆಂದು ಆಶ್ವಲಾಯ ನಾದಿ ಮತವು. ದ್ರಾವಿಡಪಕ್ಷಾಶೌಚ ನಿರ್ಣಯದಲ್ಲಿ ವಿಸ್ತಾರವಾಗಿ ಬರೆದಿದೆ.

## ೪೪. ಗ್ರಾಮಾಶೌಚ ವಿಚಾರಃ

ಗ್ರಾಮಾಶೌಚ ವಿಷಯಃ.—ದ್ರಾವಿಡಪಕ್ಷೇ ಪ್ರಾಗುದಾಹೃತ ಪ್ರಕಾರ ವಿಚಾರಃ ಅತ್ರಾಪಿ ದ್ರಷ್ಟವ್ಯಃ। ಷಡಶೀತೌ ಕಿಂಚಿದ್ವಿಚಾರಃ—ಚತುಶ್ಶತಾಧಿಕ ಬ್ರಾಹ್ಮ ಣೋಪೇತೇ ಗ್ರಾಮೇ ವೀಧ್ಯಂತರೇಸತಿ ಏಕಾದಶ ಧನುರ್ಮಾತ್ರ ವ್ಯವಧಾನಾ ಭಾವೇಪಿ ಗ್ರಾಮಾಶೌಚಂ ನಾಸ್ತಿ। ಸ್ಮೃತ್ಯಂತರೇ।

ಶ್ಲೋ॥ ಅನಾಥಾನ್ಯನುಪನೀತಾನಾಂ ಶೂದ್ರಾಣಾಂಚ ತಥಾ ಸ್ತ್ರಿಯಾಂ।
ಅಂತಕ್ಯವಸ್ಯ ದೋಷಸ್ತು ಗ್ರಾಮಾದೌಚ ನಲಿಪ್ಯತೇ॥
ಮುನೀನಾಂಚ ಯತೀನಾಂಚ ಪರಕಾಯಪ್ರವೇಶಿನಾಂ।
ಮರಣಂ ಯತ್ರ ಸಂಭೂತಂ ತತ್ರ ದೋಷೋ ನಲಿಪ್ಯತೇ॥
ಶೂದ್ರಾದೀನಾಂತು ಮರಣಂ ಸಂಭವೇದ್ಯತ್ರ ಕುತ್ರಚಿತ್।
ಆಶೌಚಂ ಗೃಹಮಾತ್ರಸ್ಯ ಗ್ರಾಮಾಶೌಚಂ ನವಿದ್ಯತೇ॥

ಮುನಿಕಲ್ಪಾನಾಂ ಯತೀನಾಂ, ಪರಕಾಯಪ್ರವೇಶಿನಾಂ, ಅನುಪನೀತಾ ನಾಂ, ಸ್ತ್ರೀಣಾಂ, ಶೂದ್ರಾಣಾಂ, ಅನಾಥಾನಾಂಚ ಮೃತೌ ಗ್ರಾಮಾಶೌಚಂ ನಾಸ್ತಿ। ತದ್ಗೃಹಮಾತ್ರಸ್ಯಾಶೌಚಮಸ್ತಿ। ಗ್ರಾಮಾಶೌಚಮಿತ್ಯುಕ್ತೇ:—

ಶ್ಲೋ॥ ಯಾವದ್ಗ್ರಾಮಸ್ಯ ಮಧ್ಯೇತು ಶವಂ ಪ್ರೇತಸ್ಯ ತಿಷ್ಠತಿ।
ಗ್ರಾಮಸ್ಯ ತಾವದಾಶೌಚಂ ನಿರ್ಹೃತೇ ಶುದ್ಧಿರಿಷ್ಯತೇ॥

ವ್ಯಾಖ್ಯಾ। ಯಾವತ್ಕಾಲಂ ಗ್ರಾಮಮಧ್ಯೇ ಪ್ರೇತಶರೀರಂ ತಿಷ್ಠತಿ ತಾವತ್ಕಾಲಂ ಗ್ರಾಮಸ್ಯಾಶೌಚಂ। ತಸ್ಮಿನ್ ಗ್ರಾಮಾದ್ಬಹಿರ್ನಿರ್ಹೃತೇ ದಗ್ಧೇಪಿ ಸತಿ ಗ್ರಾಮಸ್ಯ ಶುದ್ಧಿಃ। ಅತ್ರ 'ತು' ಶಬ್ದಃ ಶವನಿರ್ಹರಣಾದಿಕಮೇವ ಗ್ರಾ ಮಸ್ಯ ಶುದ್ಧಿಕಾರಣಂ। ನಸ್ನಾನಾದಿಕಮನ್ಯದಿತಿ ವಿಶೇಷಂ ದರ್ಶಯತಿ।

